


ಸಂಪುಟ ೧೧ ಫೆಬ್ರವರಿ ೧೯೫೩ ಸಂಚಿಕೆ ೧೧

## ಕುಹಕಿಡಿಗಳು

ಹುಳಿ ಮಜ್ಜಿಗೆಯಲ್ಲಿ ಮಾದಕ ಪದಾರ್ಥವು ಸ್ವಲ್ಪ ಇದೆ. (ವೈದ್ಯಸಮ್ಮೇಳನ)
—ಗಟ್ಟಿಯಾಗಿ ಹೇಳಬೇಡಿ, ಮೊರಾರ್ಜಿ ದೇಸಾಯಿಗೆ ಕೇಳಿಸಬಹುದು!

* * *

ಲಾಯರುಗಳ ವಾರ್ಷಿಕೋತ್ಸವದಲ್ಲಿ, ಅವರವರಲ್ಲೇ ಎರಡು ಚೆಂಡಾಟದ ಟೀಂಗಳು ಪಂದ್ಯ ಆಡಿದರಂತೆ.

—ಸೋತವರು ಕೂಡಲೇ "ಅಪೀಲು" ಹೋದರಂತೆ.

* * *

ಅಧಿಕಾರದ ಮೇಲೆ ಸ್ವಲ್ಪವೂ ಆಸೆ ಇಲ್ಲ ಎಂದು ಹಲವಾರು ಜನ ಕಾಂಗ್ರೇಸ್ ಮುಖಂಡರು ಹೇಳಿದ್ದರಿಂದಲೇ, ಶ್ರೀಯುತ ಹನುಮಂತಯ್ಯನವರು ತಮ್ಮ ಕೆಲಸವನ್ನು ಮುಂದುವರೆಸಲು ನಿಶ್ಚಯಿಸಿದ್ದಾರಂತೆ.

* * *

ನಮ್ಮ ಮಗೂಗೆ ಎರಡು ವರ್ಷ ಆಯಿತು. ಇನ್ನೂ ಮಾತನಾಡುಲ್ಲ ಮೂಗನಾಗಿ ಬಿಡುತ್ತಾನೆಯೇ! ಎಂದು ತಾಯಿ ಕೇಳಿದಾಗ ವೈದ್ಯನಂದನಂತೆ ಕಿಟಕೆಗೆ ಅವನ ಬೆರಳನ್ನಿಟ್ಟು ಇರುಕಿಸಿ, ಆಗಲೂ ಮಾತನಾಡದಿದ್ದರೆ ಅವನು ಹುಟ್ಟು ಮೂಗನೇ ಅಂತ.

ಸಂಕಟ ಬಂದಾಗ ವೆಂಕಟರಮಣಾ ಅಂತಂದೆ, ಅವ ಬಂದು ವಿಷಕ್ಕೇ ಅಂತ ಇಟ್ಟಿದ್ದೊಂದು ರೂಪಾಯನ್ನ ಅಮ್ಮನಕ್ಕೈಲಿ ಮುಡುಪುಕಟ್ಟಿಸಿ ಹೊರಟೇ ಹೋದ ಎಂದೊಬ್ಬರು ಅಳುತ್ತಾ ಕಾಗದ ಬರೆದಿದ್ದಾರೆ.

—ಅಯ್ಯೋ! ವೆಂಕಟರಮಣಾ! ನಮ್ಮ ಚಂದಾ ಹಣ!!

* * *

ಮಂತ್ರಿಗಳು ನಮ್ಮಹಾಗೆ ಮನುಷ್ಯರು ಎಂದು ಪ್ರಚಾರ ಸುದ್ದಿ ಹೊರಟಿದೆ.

—ಇದರಿಂದಲೇ ಸಾಮಾನ್ಯ ಮನುಷ್ಯರು "ಅಯ್ಯೋ! ಹೀಗಾದೆವೇ!" ಅನ್ನೋ ಕಾಂತಿಹೀನ ಮುಖವಾಡ ತಾಳೋದು.

* * *

ರೈಲ್ವೆ ಶಬ್ದ ಕೆಲವು ವೇಳೆ ಹಾರ್ಮೋನಿಯಂ ತರಹಾನೇ ಇರುತ್ತೆ ಎಂದೊಬ್ಬರು ಹೇಳಿದರು.

—ಆದರೆ ರೈಲು ಆ ತರಹ ಶಬ್ದ ಮಾಡುವಾಗ ಗಂಟೆಗೆ ನಲವತ್ತು ಮೈಲಿ ದೂರ ಓಡುತ್ತಿರುತ್ತೇ! ಅದೇ ಪುಣ್ಯ!!

* * *

ಕಾಲೇಜು ವಿದ್ಯಾರ್ಥಿ ವಿದ್ಯಾರ್ಥಿನಿಗಳ ಸಂತೆಯೇ ಸೇರಿತ್ತಂತೆ ಒಂದು ಪುಸ್ತಕ ವ್ಯಾಪಾರಿ ಅಂಗಡಿ ಮುಂದೆ.

—ಓಹೋ! ಹೊಸ ಕಾದಂಬರಿ, ಪ್ರಗತಿಶೀಲದ್ದು, ಅಂದೇ ಹೊರಬಿದ್ದಿರಬೇಕು!!

* * *

ರೇಡಿಯೋ ವಿಚಾರದಲ್ಲಿ ವಿಜ್ಞಾನವು ಬಲು ಮುಂದುವರೆದಿದೆಯಂತೆ. ರೇಡಿಯೋ ಲೈಸೆನ್ಸ್ ಇಲ್ಲದೆ ಕೇಳುವವರ ಕಿವಿಗಳಿಗೆ ಕರ್ಕಶ ಧ್ವನಿಗಳೇ ಕೇಳುತ್ತಂತೆ -ಈ ಪ್ರಯೋಗದಿಂದ-

—ಲೈಸೆನ್ಸ್ ತೆಗೆದುಕೊಳ್ಳುವವರು ಜಂಬಕ್ಕೆ ಮಾತ್ರ ಕೊಳ್ಳುತ್ತಾರೆಯೇ ವಿನಹಾ ಕೇಳುವುದಕ್ಕಲ್ಲಾ ಅಲ್ಲವೇ? ಅಂಥಮೇಲೆ ವಿಜ್ಞಾನ ಏಕೆ ಬೇಕು ಇದನ್ನು ಸಾಧಿಸಲು!!

* * *

"ಕೃತಕ ರೇಷ್ಮೆ ಆಮದು!"

—ಸಂಸ್ಕೃತಿಯ ಈ ಕಾಲದಲ್ಲಿ ವಿಶ್ವಾಮಿತ್ರ ರೇಷ್ಮೆ, ವಿಶ್ವಾಮಿತ್ರ ಗೊಬ್ಬರ, ಇತ್ಯಾದಿ ಹೇಳುವುದು ಸಾಧುವಲ್ಲವೇ?

# ಉ ರಿ ಗಾ ಳು

---

ರಿಪಬ್ಲಿಕ್ ಉತ್ಸವಕ್ಕೆ ಬಂದ ಮುಖ್ಯ ಅತಿಥಿಗಳಾದ ಧರ್ಮಸಾಗರರಿಗೆ ಇದು ಎಷ್ಟನೇ ಉತ್ಸವ ಎಂದೂ ತಿಳಿದಿರಲಿಲ್ಲವಂತೆ.

*　　*　　*

ಅಧಿಕ ಗೋಧಿಯನ್ನು ಹೇಗೆ ವಿಲೇವಾರಿ ಮಾಡುವುದು ಎನ್ನುವುದೇ ಐಸನ್ ಹೋವರರ ತಲೆನೋವಂತೆ—

—ಅವರು ಹಾಡಿದ ಹಾಗೆ ನಾವು ಕುಣಿದರೆ ತಾನೇ ವಿಲೇವಾರಿ ಮಾರ್ಗ ಒಂದಾದರೂ ಅತನಿಗೆ ತೋರುವುದು.

*　　*　　*

ನೇಪಾಳದ ಚಕ್ರವರ್ತಿಯವರು ಭಾರತ ಸೈನ್ಯದ ಕರ್ನಲ್ ಆಗಿ ಗೌರವಿಸಲ್ಪಟ್ಟ ರಂತೆ.

—ನೇಪಾಳ ಬಿಸಿ ಹತ್ತಿದರೆ ಭಾರತದಲ್ಲಿ ಆಸರೆ ಖಂಡಿತ!

*　　*　　*

ಚಂದ್ರಗ್ರಹಣ ಈ ಸಾರಿ ಯಾರಿಗೂ ತ್ರಾಸು ಕೊಡದ ಹಾಗೆ ಬಂದು ಹೋಯ್ತಂತೆ.

—ಚಂದ್ರಮುಖಿಯರ ಗ್ರಹಣವೂ ಹಾಗಾಗ ಬಾರದೇ ?

*　　*　　*

ಶ್ರೀಮತಿ ದುರ್ಗಾಬಾಯಿಯವರ ವಿವಾಹವೂ ಆಂಧ್ರಪ್ರಾಂತ್ಯದ ರಚನೆಗೆ ಸಹಾಯಕಾರಿಯಾದುದು ಎನ್ನುವುದು ಸರಿಯಲ್ಲ.

*　　*　　*

ಹೈದರಾಬಾದ್ ಅಧಿವೇಶನದಲ್ಲಿ ಜೇಬುಗಳ್ಳರ ಹಾವಳಿ ಹೆಚ್ಚಾಗಿತ್ತಂತೆ— ಕಾಂಗ್ರೆಸು ಮುಖಂಡರ ಜೇಬುಗಳೂ ಖಾಲಿಯಾದುವಂತೆ!

—ಕೆರೆಯ ನೀರನ್ನು ಕೆರೆಗೆ ಚೆಲ್ಲಿದಂತೆ ಆಯಿತು ಅಷ್ಟೆ!

*　　*　　*

**ಜಸ್ಟಿಸ್ ವಾಂಚೂ ಅವರ ಮೋಟಾರಿಗೆ ದೊಂಬಿಯೊಂದು ಕಲ್ಲು ಬೀರಿತಂತೆ-ದೊಂಬಿ ಆಂಧ್ರರದೇ ಅಂತೆ!**

—ಆಂಧ್ರಪ್ರಾಂತ್ಯ ಆಗಲಿ ಅಂದರೂ ಇದು ತಪ್ಪೇನಿಲ್ಲವಲ್ಲಾ! ಅಂತ, ವಾಂಚೂ ಅಂದರಂತೆ.

* * *

ತುಂಬಾ ಸನ್ನಿ ಹತ್ತಿದಾಗ ಹಣೆಯಮೇಲೆ ಒದ್ದೆ ಒಟ್ಟೆ ಹಾಕುತ್ತಾರಂತೆ!

—ಹೌದು! ಆದರೆ ಹೊಟ್ಟೆಮೇಲೆ ಒದ್ದೆ ಬಟ್ಟೆ ಹಾಕಲು ಅಧಿಕಾರಿಗಳಿಗೆ ಸನ್ನಿ ಬಂದಿರಬೇಕು ಎಂದೇ!

* * *

"ನಮ್ಮೂರಿನಲ್ಲಿ ಕೆಂಪು ಮುಲ್ಲಂಗಿ ತಿನ್ನೋದು ಹೆಚ್ಚಾಗಿದೆ" ಹೇಳಿಕೆ.

—ಇದು ರಷ್ಯಾದವರ ಕೈವಾಡ ಅಂತ ಇನ್ನೂ ಯಾರೂ ಹೇಳಿಕೆ ಇತ್ತಿಲ್ಲ.

* * *

ಸ್ವರ್ಗವಾಸಿಗಳಿಗೆ ಹಸಿವೇ ಇಲ್ಲವಂತೆ.

—ಅದಕ್ಕೇ ನಮ್ಮ ಸರ್ಕಾರ ನಮ್ಮ ದೇಶ ಸ್ವರ್ಗಸಮಾನ ಅಂತ ನಿರ್ಧಾರ ಮಾಡಿಕೊಂಡಿರೋದು!!

* * *

ಮನೆಕಟ್ಟಕ್ಕೆ ಅಂತ ಪಾಯ ತೋಡಿದಾಗ, ಹತ್ತಡಿ ಆಳದಲ್ಲಿ ಎರಡು ದವಡೆ ಹಲ್ಲು ಸಿಕ್ಕಿದುವಂತೆ. (ಪತ್ರಿಕೆ)

—ನಮ್ಮ ದವಡೆಯಿಂದ ಹಲ್ಲು ಕಿತ್ತಾಗಲೂ ಹತ್ತಡಿ ಆಳದಿಂದಲೇ ಕಿತ್ತ ಹಾಗಿತ್ತು ನಮಗೆ.

* * *

ಹಸುವಿನ ಹಾಲಿಗೆ ಸಮನಾದ ಪದಾರ್ಥ ಮತ್ತೊಂದಿಲ್ಲ. (ವೈದ್ಯರು)

—ಅಂದಮೇಲೆ ಕವಾಡಿಗ ದಿನಾಲೂ ನಮಗೆ ಸರಬರಾಜು ಮಾಡೋದರ ಮರ್ಮ ವೈದ್ಯರಿಗೂ ತಿಳಿದಿರಲಿಕ್ಕಿಲ್ಲ.

* * *

ಇದರ ಮರ್ಮ ಅರ್ಥವೇ ಆಗಲ್ಲ ಅಂದ್ರೆ! ಬಸ್ಸುಗಳು ಹೆಚ್ಚಾದ ಹಾಗೆಲ್ಲಾ ಜಟಕಾಗಳ ಬಾಡಿಗೆಯೂ ಹೆಚ್ಚಾಗುತ್ತಾ ಇದೆ.

—o—

# ಕಾನ್ವೊಕೇಷನ್ ಗೌನು

---

ಎಲ್ಲಾ ಕ್ಷೇತ್ರಗಳಲ್ಲೂ ಸುಧಾರಣೆಗಳಾಗುತ್ತಿರುವಕಾಲ ಇದು. ರಾಜಕಾರಣಿಗಳು, ಸಂಸ್ಕೃತಿ ಸಂಪನ್ನರು, ಸಾಹಿತಿಗಳು, ಕಡೆಗೆ ಸಾಮಾನ್ಯ ಮನುಷ್ಯಕೂಡ ಪ್ರತಿಯೊಂದು ವಿಚಾರದಲ್ಲೂ ಸುಧಾರಣೆಗಳಾಗಬೇಕು ಎಂದು ದಿನ ಬೆಳಗಾದರೆ ಹೇಳುತ್ತಿರುತ್ತಾರೆ. ಸರ್ಕಾರದ ವಿವಿಧ ಇಲಾಖೆಗಳಲ್ಲಿ ಸುಧಾರಣೆಗಳಾಗಬೇಕು, ಶಿಕ್ಷಣ ಪದ್ಧತಿಯಲ್ಲಿ ಸುಧಾರಣೆಗಳಾಗಬೇಕು, ಆಸ್ತಿವಿಭಾಗದಲ್ಲಿಸುಧಾರಣೆಗಳಾಗಬೇಕು. ವಿವಾಹಾ ಪದ್ಧತಿಗಳಲ್ಲಿ ಸುಧಾರಣೆಗಳಾಗಬೇಕು, ಕೈಗಾರಿಕೆ ವ್ಯವಸಾಯ ಕ್ಷೇತ್ರಗಳಲ್ಲಿ ಸುಧಾರಣೆಗಳಾಗಬೇಕು. ಆಸ್ಪತ್ರೆಯಲ್ಲಿ ಸುಧಾರಣೆಗಳಾಗಬೇಕು. ಬಿ. ಬಿ. ಸಿ ಯಲ್ಲಿ ಸುಧಾರಣೆಗಳಾಗಬೇಕು, ಜೈಲುಗಳಲ್ಲಿ ಸುಧಾರಣೆಗಳಾಗಬೇಕು ಎಂದು ಬರೆದ ಲೇಖನವನ್ನ ಮೊನ್ನೆತಾನೆ ಪೇಪರುಗಳಲ್ಲಿ ನೀವು ಓದಿದೀರಿ! ಹೀಗೆ ಪ್ರತಿಯೊಂದು ಬಾಬಿನಲ್ಲೂ ಸುಧಾರಣೆಗಳಾಗಬೇಕು ಅಂತ ಜನ ಹಾ ತೊರೆಯುತ್ತಿರುವಾಗ, ನಮ್ಮಲ್ಲಿ ಪ್ರತಿ ವರ್ಷ ನಡೆಯುವ ಕಾನ್ವೊಕೇಷನ್ ಅಥವ ಡಿಗ್ರಿ ದಾನ ಮಹೋತ್ಸವದಲ್ಲಿ ನಮ್ಮ ನೂತನ ಪದವೀಧರರು ತೊಟ್ಟುಕೊಳ್ಳುವ ಗೌನುಗಳಲ್ಲಿ ಏನಾದರೂ ಸುಧಾರಣೆಗಳಾಗುವುದು ಅಗತ್ಯ ಎಂದು ಇದುವರೆಗೂ ಯಾರೊಬ್ಬರೂ ಹೇಳದಿರುವುದು ಶೋಚನೀಯ!

ಅದೇ ವಾಸಲು ಹಳೇ ಗೌನನ್ನೇ ಬಾಡಿಗೆಗೆ ಪಡೆದು, ಇಸ್ತ್ರಿಮಾಡಿ ಸುತ್ತಿಟ್ಟ ಅವೇ ಹಳೇ ರುಮಾಲನ್ನೇ ಏರಿಸಿಕೊಂಡು ನಮ್ಮ ನೂತನ ಗ್ರಾಜುಯೇಟುಗಳು ಪದವೀದಾನ ಮಹೋತ್ಸವಕ್ಕೆ ಮೊನ್ನೆ ಹೊರಟಾಗ—ನಾನು ಅವರನ್ನು ನೋಡಿ ಪುನಃ ಪೂರ್ತಿ ನಕ್ಕಾಗ, ಹೀಗೆ ಇದನ್ನು ಸುಧಾರಿಸಿದರೆ ಇನ್ನೂ ಚೆನ್ನ ಅಲ್ಲವೇ ಎಂದು ಹೊಳೆಯಿತು. ಯಾತಕ್ಕೆಂದರೆ ಈಗಿನ ಕಾಲದಲ್ಲಿ ಸಾವಿರಕ್ಕೂ ಮೀರಿ ಗ್ರಾಜುಯೇಟುಗಳು ಪ್ರತಿ ವರ್ಷವೂ ಡಿಗ್ರಿ ತೆಗೆದುಕೊಳ್ಳುತ್ತಾರೆ. ಅಷ್ಟು ಜನವೂ ಅವತ್ತು ಲಕ್ಷಣವಾಗಿ ಜರತಾರಿ ಮೈಸೂರು ರುಮಾಲು ಕಟ್ಟಿ, ಗರಮಾಗರಂ ಇಸ್ತ್ರಿ ಮಾಡಿದ ತಾಜ ಪರಾಯಿ ಧರಿಸಿಕೊಂಡು, ಎಳೆಗಾಳಿಗೆ ರೆಕ್ಕೆ ಬಡಿಯುವ ಭಾರಿ ಕರಿಗೌನಿನಲ್ಲಿ ಇಳಿದರೆ ನೋಡುವುದಕ್ಕೆ ಎರಡು ಕಣ್ಣು ಸಾಕೆ? ಅವರು ಡಿಗ್ರಿಸುರಳಿಯನ್ನು ಹಿಡಿದು ಹಾಗೆ ಬಣ್ಣ ಬಣ್ಣದಲ್ಲಿ ಟೀಕ್ ಟಾಕ್ ಆಗಿ ನಡೆಯುತ್ತಿದ್ದರೆ ಅದನ್ನು ನೋಡಿ ಆನಂದಿಸುವುದಕ್ಕೆ ಎರಡು ಕಣ್ಣು ಸಾಕೆ? ಹಾಗೇ ಅವರು ಒರಬೇಕು! ತಂದೆ ತಾಯಿಗಳು ನೋಡಿ ನಲಿಯಬೇಕು. ನಾಗರೀಕರು ನೋಡಿ ತಣಿಯಬೇಕು. ಇಡೀ ನಗರಕ್ಕೇ ಅಂದು ಕಣ್ಣಿಗೆ ಹಬ್ಬವಾಗಬೇಕು. ಆ ಹಬ್ಬ ಅಂದು ಇನ್ನೂ ಚನ್ನಾಗಿ ನಡೆಯಬೇಕು ಅಂತಲೇ ನಾನು ಈ ಸುಧಾರಣೆಯನ್ನು ಸೂಚಿಸು

ವುದು. ಇರುವ ಸತ್ಸಂಪ್ರದಾಯವನ್ನು ಉಳಿಸಿಕೊಂಡು ಯಾವುದಾದರೂ ರೀತಿಯಲ್ಲಿ ಅದನ್ನೇ ಹೆಚ್ಚು ಉಪಯುಕ್ತವನ್ನಾಗಿಮಾಡುವುದೇ ಒಳ್ಳೆಯ ಸುಧಾರಣೆ ಎಂದು "ಕಾರ್ಲೈಲ್" ಹೇಳಿದ್ದಾನೆ!

ನೂರಾರು ಪದವೀಧರರು ಡಿಗ್ರಿದಾನ ಮಹೋತ್ಸವದ ದಿವಸ, ಮಹೋತ್ಸವದ ಮಂದಿರದಲ್ಲಿ ಕೂತುಕೊಂಡಿರುವ ದೃಶ್ಯ ಎಷ್ಟು ಮನಮೋಹಕ. ಅವರು ಪ್ರಮಾಣ ವಚನ ಕೈಗೊಳ್ಳಲು ಅವರವರ ಡಿಗ್ರಿಗನುಸಾರವಾಗಿ ಸಾಲು ಸಾಲಾಗಿ ನಿಂತುಕೊಳ್ಳುವ ದೃಶ್ಯ ಎಷ್ಟು ಸೊಗಸಾಗಿರುತ್ತದೆ. ಆದರೆ ಆ ದೃಶ್ಯ ಇನ್ನೂ ಸೊಂಪಾಗಬೇಕಾದರೆ ಇನ್ನೂ ರಂಜನೀಯವಾಗಬೇಕಾದರೆ ಆ ಕರಿ ಗೌನುಗಳಿಗೆ ಸ್ವಲ್ಪ ಬೆಳಕನ್ನು ಚೆಲ್ಲಲೇಬೇಕು!

ಆಯಾ ಡಿಗ್ರಿಗಳನ್ನು ಸಂಕೇತವಾಗಿ ಸೂಚಿಸುವ ಚಿತ್ತಾರಗಳನ್ನು ಗೌನಿನ ಮೇಲೆ "ಪ್ರಿಂಟ್" ಮಾಡುವುದರಿಂದ ಆಬೆಡಗು ಇಮ್ಮಡಿಯಾಗುವುದಿಲ್ಲವೆ? ಅದು ಒಂದು ಅರ್ಥ ಪೂರ್ಣ ಅಲಂಕಾರನಾಗುವುದಿಲ್ಲವೆ? ಉದಾಹರಣೆಗೆ, "ಆರ್ಟ್ಸ್" ಡಿಗ್ರಿಗಳನ್ನು ಪಡೆಯುವ ಪದವೀಧರರು ಧರಿಸಿಕೊಳ್ಳುವ ಗೌನುಗಳ ಮೇಲೆ, ಕಲೆ ಮತ್ತು ಅದರ ವಿವಿಧ ಶಾಖೆಗಳನ್ನು ಸಂಕೇತವಾಗಿ ಸೂಚಿಸುವಂತಹ, ಟಾಜ್ ಮಹಲ್, ಕುತಬ್ ಮಿನಾರ್, ರಾಜ್ಯಾಂಗ ಮಂದಿರ, ಲಂಡನ್‌ಟವರ್, ಮಹೆನ್ ಜೋದರೋ, ಹಳೆನಾಣ್ಯಗಳು, ಶಿಲ್ಪಿಗಳು, ಭಾರತದ ರಿಸರ್‌್ವ ಬ್ಯಾಂಕು, ಲಂಡನ್ ಬ್ಯಾಂಕು, ಡಾಲರ್, ರೂಪಾಯಿ, ನೋಟು, ಚೆಕ್ಕುಗಳು, ಷೇಕ್ಸ್‌ಪಿಯರ್, ಮಿಲ್ಟನ್ ರನ್ನನರುಜು, ಗೋಮಟೇಶ್ವರ, ಸಾಂಚಿಸ್ತೂಪ, ಬೇಲೂರು ಶಿಲಾ ಬಾಲಿಕೆಯರು, ಬ್ಯಾಲೆಟ್ ಬಾಕ್ಸ್, ಅಶೋಕಚಕ್ರ ಮುಂತಾದ ಚಿತ್ರಗಳನ್ನು ಚಿತ್ರಿಸುವುದರಿಂದ, ಆ ಕರಿ ಗೌನುಗಳಿಗೆ ಜೀವ ತುಂಬಿದ ಹಾಗೆ ಆಗುವುದಿಲ್ಲವೆ! ಅಂತಹ ಗೌನುಗಳನ್ನು ಧರಿಸಿದರೆ ನಮ್ಮ ಪದವೀದರರು ಇನ್ನೂ ಕಳೆಕಳೆಯಾಗಿ ಕಾಣಿಸುವುದಿಲ್ಲವೆ? ಆ ಮೇಲೆ "ಸೈನ್ಸ್" ಡಿಗ್ರಿಗಳನ್ನು ಪಡೆಯುವ ಪದವೀಧರರು ಧರಿಸಿಕೊಳ್ಳುವ ಗೌನು ಗಳೇ ಬೇರೆ. ಆ ಗೌನುಗಳ ಮೇಲೆ, ಉದ್ದುದ್ದದ ಫ್ಲಾಸ್ಕುಗಳು, ಬೀಕರುಗಳು, ಬೆಲ್ಜಾರುಗಳು, ಟೆಸ್ಟ್ ಟ್ಯೂಬುಗಳು, ನಾಮದ ಹಾಗೆ ಕಾಣುವ ಟ್ಯೂನಿಂಗ್ ಫೋರ್ಕುಗಳು ಧಾರ ತೂಗಿಬಿಟ್ಟ ಗುಂಡುಗಳು; ರಸಾಯನಿಕ ತಕ್ಕಡಿ, ತ್ರಿಭುಜ, ಚತುರ್ಭುಜಗಳು; ಋಣ ಧನ (+,—) ಚಿಹ್ನೆಗಳು; ಡೆಲ್ಟ ತೀಟೆಗಳು; M–M' ಗಳು, $S_1$, $S_2$ ಗಳು; P Q R ಗಳು ಮುಂತಾದ ಚಿತ್ರಗಳನ್ನು ಚಿತ್ರಿಸುವುದರಿಂದ, ಆ ಗೌನುಗಳು ವಿಜ್ಞಾನ ಶಾಸ್ತ್ರವನ್ನು ಸಾರುವುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಅಷ್ಟೇ ಅಲ್ಲ, ಈ ಋಣ, ಧನ ಚಿಹ್ನೆಗಳು, ಡೆಲ್ಟ, ತೀಟೆಗಳು ಕರಿಯ ನೈಲಾನ್ ಮೇಲೆ ಪ್ರಿಂಟ್‌ಮಾಡಿದ ಬಿಳಿಯ ಚಿಟ್ಟೆಗಳಂತೆ ಕಂಗೊಳಿಸುತ್ತ ಭ್ರಾಂತಿ ಯನ್ನು ಹುಟ್ಟಿಸುತ್ತವೆ! ಒಂದೊಂದು ಡಿಗ್ರಿಯನ್ನೂ ಟೇಕಿಟೇಕೆಯಾಗಿ ಗುರ್ತಿಸಲನು ಕೂಲವಾಗುವಂತಹ ಬಣ್ಣದ ಹುಡ್ಡುಗಳ ಏರ್ಪಾಟುಚನ್ನಾಗಿಯೇ ಇದೆ. ಎರಡು

ಭಾಗಗಳಲ್ಲೂ ಆನರ್ಸ್ ಮತ್ತು ಮಾಸ್ಟರ್ ಪದವೀಧರರನ್ನು ಬೇಕಾದರೆ ಸುಲಭವಾಗಿ ನಾವು ಗುರ್ತಿಸಿಕೊಳ್ಳ ಬಹುದು!

ಔದ್ಯೋಗಿಕ ಪದವಿಗಳನ್ನು ಸ್ವೀಕರಿಸುವ ಪದವೀಧರರು ತೊಡುವ ಗೌನುಗಳೂ ಹೀಗೆಯೇ ಇರುತ್ತವೆ. ಬಿ. ಇ ಡಿಗ್ರಿಯ ಗೌನಿನ ಮೇಲೆ, ವಿದ್ಯುತ್ ಕಂಬಿಗಳ ಸಾಲು, ಉದ್ದುದ್ದ ನಿಯಾನ್ಸ್‌ಗಳು, Ac, Dc ಬೀಜಾಕ್ಷರಗಳು ನಡುವೆನಡುವೆ, ಸೊಗಸಾದ ಕಟ್ಟಡದ ಪ್ಲಾನುಗಳು, ತೂಗು ಸೇತುವೆಗಳು, ಭಾರಿ ಇಂಚುಪಟ್ಟಿಗಳು ಯಂತ್ರದ ಭಾಗಗಳು ಮುಂತಾದುವುಗಳ ಚಿತ್ರಗಳನ್ನು; ಎಂ. ಬಿ. ಬಿ. ಎಸ್. ಗೌನಿನ ಮೇಲೆ, ಸ್ಟೆತಸ್ಕೋಪು ಇಂಜಕ್ಷನ್‌ಕೊಳವೆ, ಥರ್ಮಾಮೀಟರ್, ಸ್ಟ್ರೆಚರ್, ಶ್ವಾಸ ಕೋಶದ ಎಕ್ಸ್‌ರೆ ಚಿತ್ರಗಳು, ವಿಟಮೀನುಗಳ ಪಟ್ಟಿ ಮುಂತಾದ ಚಿತ್ರಗಳನ್ನೂ, ಬಿ. ಎ ಜಿ. ಗೌನಿನ ಮೇಲೆ, ಟ್ರಾಕ್ಟರುಗಳು, ಬುಲ್‌ಡೋಸರುಗಳು, ತೆನೆಕೂಡಿದ ಭತ್ತ, "ಮಿಡಿದರೆ ರಸ ಒಸರುವ" ರಸದಾಳಿ ಸಿಂಧ್ರಿ ಕಾರ್ಖಾನೆಯ ಪ್ಲಾಂಟುಗಳು ಮುಂತಾದುವುಗಳ ಚಿತ್ರಗಳನ್ನು ಬರೆಸುವುದರಿಂದ ಆ ಗೌನುಗಳು ಅರ್ಥಗರ್ಭಿತವಾಗಿ ಆಯಾಯ ಡಿಗ್ರಿಗಳನ್ನು ಸಾರುತ್ತವೆ. ಹೀಗೆ ಸಿದ್ಧವಾದ ಸುಧಾರಿತ ಗೌನುಗಳನ್ನು ಧರಿಸಿಕೊಂಡು ನಮ್ಮ ಪದವೀದರರು, ಒಂಡೆಡೆ ಸೇರಿದರೆ ಆ ದೃಶ್ಯ ಹೇಗಿರುತ್ತೆಂಬು ದನ್ನು ನೀವೇ ಊಹಿಸಿಕೊಳ್ಳಿ, ಪದವೀದಾನ ಸಮಾರಂಭದ ದಿವಸ ಅವರು ಈ ಗೌನು ಗಳನ್ನು ಹಾಕಿಕೊಂಡು ಬೀದಿಗಳಲ್ಲಿ ತಿರುಗಾಡ ಹತ್ತಿದರೆ ಯಾರು ಬೇಕಾದರೂ ಅವರವರ ಡಿಗ್ರಿ ಇಂತಹುದೇ ಎಂಬುದನ್ನು ಆದಷ್ಟು ಸುಲಭವಾಗಿ ತಿಳಿದುಕೊಳ್ಳ ಬಹುದು. ಅವರ ಡಿಗ್ರಿ ಸುರಳಿಯನ್ನು ಬಿಚ್ಚಿನೋಡುವ ಅವಶ್ಯಕತೆಯೇ ಇರುವು ದಿಲ್ಲ. ಎರಡನೆಯದಾಗಿ ಚಿತ್ರ ಕಲೆಗೆ ಪ್ರೋತ್ಸಾಹ ಕೊಟ್ಟಂತಾಗುತ್ತದೆ. ಹಳೆಯ ಗೌನುಗಳು ಮಾಯವಾಗಿ ಹೊಸಗೌನುಗಳು ಬರುತ್ತವೆ.

ಇದರ ಜೊತೆಗೆ ಇಂತಹ ಗೌನುಗಳನ್ನು ನಮ್ಮ ಪದವೀದರರು ತೊಡುವುದರಲ್ಲಿ ಮಹತ್ವವೂ ಇದೆ. ಬರೀ ಕರಿಯಗೌನೇ ಈಗ ಅಷ್ಟೊಂದು ಶಿಸ್ತು, ಜವಾಬ್ದಾರಿಗಳ ಪ್ರಭಾವವನ್ನು ಬೀರುತ್ತಿರುವಾಗ, ತಮ್ಮ ಮೈಮೇಲೆ ಕಂಗೊಳಿಸುವ ಟಾಜ್ ಮಹಲ್ ಅವರ ಸಂಸ್ಕೃತಿ ಶಕ್ತಿಗೆ ಸ್ಫೂರ್ತಿ ಕೊಡುವುದಿಲ್ಲವೇನು? ಸೋಮನಾಥದೇವಾಲಯದ ಚಿನ್ನದ ಬಾಗಿಲು ಅವರ ನಾಡಿಗಳನ್ನು ಮಿಡಿಯುವುದಿಲ್ಲವೇನು? ಇಂಜಕ್ಷನ್ ಟ್ಯೂಬು ಅವರ ಕರ್ತವ್ಯ ನಿಷ್ಠೆಯನ್ನು ಚೇತನ ಗೊಳಿಸುವುದಿಲ್ಲವೆ? ಸಾಲು ಸಾಲು ವಿದ್ಯುತ್ ಬಲ್ಬುಗಳು ಹತ್ತಿಕೊಂಡು ಉರಿಯುತ್ತಿವೆಯೋ ಎನ್ನುವ ಭಾವನಾ ಪರವಶತೆಯನ್ನು ಅವರು ಹೊಂದುವುದಿಲ್ಲವೆ?

ಅವರವರ ಕರ್ತವ್ಯ, ಜವಾಬ್ದಾರಿಗಳನ್ನು ನೆನಪಿಗೆ ತಂದು ಕೊಡುವ ಪರ ಮೋದ್ದೇಶವೇ ಪದವೀದಾನ ಸಮಾರಂಭದ ಔಚಿತ್ಯವಾಗಿರುವಾಗ, ಈ ಸುಧಾರಿತ ಗೌನುಗಳೂ ಆ ಕೆಲಸದಲ್ಲಿ ನೆರವಾಗುವುದಿಲ್ಲವೆ, ನೀವೇಹೇಳಿ.

—ಶಾ. ಶಾ.

---

 # ಅನರ್ಥಕೋಶ 

---

ಅನರ್ಥಕೋಶ—ಶ್ರೀ ನಾ. ಕಸ್ತೂರಿ: ಸಂಪಾದಕರು ಮತ್ತು ಪ್ರಕಾಶಕರು-ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ, ಮೈಸೂರು, ಪರವಾಗಿ ಶ್ರೀ ಟಿ. ಎಸ್. ಶಾಮರಾವ್, ಎಂ.ಎ., ೧೯೫೨. ಪುಟ IV+179. ಬೆಲೆ: ಎರಡು ರೂಪಾಯಿ.

ಈ ಕೋಶದ ಕರ್ತರಾದ 'ಅನರ್ಥಕಾರಿ' ಶ್ರೀ. ನಾ. ಕಸ್ತೂರಿಯವರ ಪರಿಚಯ ಇಲ್ಲದವರು ಬಹುಶಃ ಕನ್ನಡಲೋಕದಲ್ಲಿರಲಾರರು. ಆಧುನಿಕ ಕನ್ನಡ ಸಾಹಿತ್ಯದಲ್ಲಿ 'ನಕ್ಕು ನಗಿಸುವಾ ನುಡಿ'ಯ ಲೇಸಾದ ಮಾರ್ಗದಿಂದ ಗಾಳಿಗೋಪುರ, ಚಕ್ರದೃಷ್ಟಿ, ಶಂಖವಾದ್ಯ, ಅಣಕು ಮಿಣುಕು, ಯದ್ವಾತದ್ವಾ, ಚಿತ್ರವಿಚಿತ್ರ, ಇತ್ಯಾದಿ ಅನೇಕ ಹಾಸ್ಯ ಪ್ರಧಾನವಾದ ಕೃತಿಗಳ ಮೂಲಕವೂ, ಸರಳವಾದ, ತಿಳಿಯಾದ, ಹಾಸ್ಯಪೂರಿತವಾದ ಅವರ ಭಾಷಣಗಳ ಮೂಲಕವೂ ಕನ್ನಡನಾಡಿನ ಎಲ್ಲ ಭಾಗಗಳಲ್ಲೂ ನಗೆಬುಗ್ಗೆಯನ್ನೆಬ್ಬಿಸಿ ವಿಡಂಬನಾಚಾರ್ಯರೆಂದು ಹೆಸರು, ಕೀರ್ತಿ ಪಡೆದು ಕನ್ನಡಿಗರಿಗೆ ಆಗಲೇ ಪರಿಚಿತರಾಗಿದ್ದಾರೆ. 'ಕೊರವಂಜಿ' ಓದುಗರಿಗಂತೂ ಅವರು ಸುಪರಿಚಿತರೇ.

ಪ್ರಕೃತ ಶ್ರೀ. ನಾ. ಕ. ಅವರು ತಮ್ಮ ಇತರ ಒಂದೊಂದು ಪುಸ್ತಕದಲ್ಲಿಯೂ ಇರುವಂತೆ ಮತ್ತೊಂದು ನವೀನ ಮಾರ್ಗದಲ್ಲಿ ಕನ್ನಡಿಗರಿಗೆ 'ಹಾಸ್ಯ'ದ ಸವಿಯನ್ನು ಸ್ವಾರಸ್ಯವನ್ನು ಉಣಿಸುವ ಪ್ರಯತ್ನಮಾಡಿರುತ್ತಾರೆ. ಇದು ಕನ್ನಡಲೋಕಕ್ಕೆ ಮಾತ್ರವೇ ಹೊಸದಲ್ಲದೆ ಇತರ ಅನೇಕ ಭಾಷಾ ಸಾಹಿತ್ಯಗಳಿಗೂ ಹೊಸದು ಎಂಬುದನ್ನು ನೆನೆಸಿಕೊಂಡರೆ ಈ ಹೊತ್ತಗೆಯ ಸ್ವಾರಸ್ಯ ಅರ್ಥವಾಗಬಹುದು. ಇದೊಂದು ಹೊಸ ಪ್ರಯೋಗವಾದರೂ ಹೆಮ್ಮೆಯನ್ನು ತರುವಂತಹುದು.

ಸಾಮಾನ್ಯವಾಗಿ ರಸಿಕಲೋಕದಲ್ಲಿ ಅನೇಕವೇಳೆ ಸಂಭಾಷಣೆಮಾಡುವಾಗ ಅನೇಕ ಮಾತುಗಳಿಗೆ ಹೊಸ ಅರ್ಥಗಳನ್ನು—ಅನುಭವಕ್ಕೆ ಸನ್ನಿವೇಶಕ್ಕೆ, ರಸಿಕತೆಗೆ ತಕ್ಕಂತೆ—ಕಲ್ಪಿಸಿ ಹೇಳಿ ಅವರ ಹಾಸ್ಯದ ಸವಿಯನ್ನು ಸವಿದು ಮತ್ತೊಬ್ಬರು ಅದಕ್ಕೆ ತಕ್ಕ ಮಾರುತ್ತರ, ಮತ್ತೊಂದು ಅರ್ಥ ಕಲ್ಪಿಸಿ ಹೇಳಿ ಅದನ್ನು ಎಲ್ಲರೂ ಅನುಭವಿಸಿ ಆನಂದ ಪಡುವುದು ರೂಢಿ. ಈ ಉದ್ಯಮದಲ್ಲಿಯೂ ಶ್ರೀ. ನಾ. ಕ. ರು ಬಹಳ ಪರಿಚಿತರು. ಇದನ್ನು ಅಷ್ಟಕ್ಕೆ ಬಿಡದೆ ಗುರುತು ಹಾಕಿ, ಕಲೆಹಾಕಿ ಪುಸ್ತಕದ ರೂಪದಲ್ಲಿ ಕೊಟ್ಟಿರುವುದು ಅಭಿನಂದನೀಯ. ಈ ಕೆಲಸದಲ್ಲಿ ಅವರ ರಸಜ್ಞತೆ, ಪಾಂಡಿತ್ಯ ಕಲ್ಪನೆ ಶಕ್ತಿ ಅನುಭವ, ಸಮಯ ಸ್ಫೂರ್ತಿಗಳೆಲ್ಲವನ್ನೂ ಗುರುತಿಸಬಹುದು.

'ಕನ್ನಡ ತಾಯಿಗೆ ಇದು ಒಂದು ಕುಹಕದಕಾಣಿಕೆ' ಎಂದು ಗ್ರಂಥಕರ್ತರು ವಿನಯದಿಂದ ಹೇಳಿಕೊಂಡಿರುವರಾದರೂ, ಇದು ಒಂದು ಅಪೂರ್ವ ಕಾಣಿಕೆ ಎಂದು ನಿಸ್ಸಂದೇಹವಾಗಿ ಹೇಳಬಹುದಲ್ಲವೆ? 'ಹೊಕ್ಕ ಮನೆಯನ್ನು ಚೊಕ್ಕ'ಮಾಡುವ ಕೆಲಸವನ್ನು ಕಸ್ತೂರಿಯವರು ಚೆನ್ನಾಗಿಯೇ ನಿರ್ವಹಿಸಿರುವರೆಂದು ಧಾರಾಳವಾಗಿ ಹೇಳಬಹುದು. ಅವರ ಈ 'ಚಾಳಿ' ಕನ್ನಡಕ್ಕೆ ಬಹು ದೊಡ್ಡ ಉಪಕಾರಮಾಡಿದೆ ಎನ್ನಬಹುದು. ಖಾರಾಂತ ಎಂಬ ಅವರ ಹಿಂದಿನ ಹೆಸರಿನಲ್ಲಿ ಅನರ್ಥಕೋಶದ ಬಹುಭಾಗವನ್ನು ಆಗಲೇ ನಾವು ಕಂಡಿದ್ದರೂ, ಅಲ್ಲಲ್ಲೇ, ಕಂಡ ತಕ್ಷಣ, ಕಣ್ಣನ್ನು ಮನಸ್ಸನ್ನು ಸೆಳೆಯುವ, ಕೆಲವು ಉದಾಹರಣೆಗಳನ್ನು ಕೊಡಬಹುದು-ಕೇವಲ ಸ್ಯಾಂಪಲ್ ಆಗಿ ಮಾತ್ರ!

ಅಕ್ರೂರ = ರಿಟೈರಾದ ಉನ್ನತಾಧಿಕಾರಿ.

ಅನರ್ಥಕೋಶ = ಜೋಕಾಚಾರ್ಯರೂ ಠೀಕಾಚಾರ್ಯರೂ ಸೇರಿ ರಚಿಸುವ ಗ್ರಂಥ.

ಉದರ = ಉದರ ನಿಮಿತ್ತಂ ಬಹು ಕೃತ ರೇಷನ್.

ಉಪದೇಶ = ಅತೀ ಅಗ್ಗದ ಮಾಲು.

ಓಟು = ಐದು ವರ್ಷಕ್ಕೊಮ್ಮೆ ಘನವಾಗುವ ಒಂದು ವಸ್ತು; ದೇಶದ್ರೋಹ ವೆಸಗಲು ನಮ್ಮ ಕೈಗೆ ಬಂದಿರುವ ಒಂದು ಅಸ್ತ್ರ.

ಅಂಗಡಿ = ಅನೇಕ ಗುಡಿಗಳು.

ಕನ್ನ = ಕಾನೂನು ಬದ್ಧವಲ್ಲದ ಸಂಪಾದನೆ.

ಕರತಲಾಮಲ = ಲಂಚ.

ಕಾಲೇಜು = ಅಪ್ಪನ ಆಸ್ತಿ ಕರಗಿಸಲು ಮಕ್ಕಳು ಸೇರಬೇಕಾದ ಸಂಸ್ಥೆ; ಇಲ್ಲಿಯ ವ್ಯಾಸಂಗದ ಬೆಲೆ ನಮಗೆ ಗೊತ್ತಿಲ್ಲದಿದ್ದರೂ, ಇದಕ್ಕಾಗುವ ಖರ್ಚು ನಮಗೆ ಗೊತ್ತು; ಏಳೆಂಟು ವರ್ಷಗಳಕಾಲ ಪುಣ್ಯವಂತರ ಮಕ್ಕಳು ಕಾಲಕ್ಷೇಪಮಾಡುವ ಜಾಗ; ಇಲ್ಲಿಂದ ಹೊರಟ ಮೇಲೆ ಅನೇಕರು ವಿದ್ಯಾವಂತರಾಗುತ್ತಾರೆ.

ಹೊಲ್ಡಾಲ್ = ಹೊಟ್ಟೆ.

ಹೋಟಲು = ಕಾಸುಕೊಟ್ಟು ಖಾಯಿಲೆ ಕೊಂಡುಕೊಳ್ಳುವ ಸ್ಥಳ.

ಹಾಸ್ಯ = ಎದೆಯೊಳಗಣ ಹುಣ್ಣಿಗೆ ಅತ್ಯುತ್ತಮವಾದ ಮುಲಾಮು; ಇತರರಿಗಾಗುವ ಅನಾಹುತಗಳು ನಮ್ಮಲ್ಲಿ ಹಾಸ್ಯವನ್ನು ಪ್ರಚೋದನೆ ಮಾಡುತ್ತವೆ.

ಹಬ್ಬ = ಅಜೀರ್ಣ ನಾಟಕದ ಪೀಠಿಕಾ ಪ್ರಕರಣ.

ಸ್ವಾರ್ಥಿ — ಉಳಿದವರ ಸ್ವಾರ್ಥಕ್ಕೆ ಗಮನಕೊಡದವ.

ಸ್ವಪ್ನ — ನಮ್ಮ ಆಸೆಗಳೆಲ್ಲ ಕೈಗೂಡುವುದು ಇದರಿಂದಲೇ.

ಹೀಗೆ ಈ ಪಟ್ಟಿಯನ್ನು ಇನ್ನೂ ಬೆಳೆಸಬಹುದು. ಈ ಕೋಶದಲ್ಲಿ ಪದಗಳಿಗೆ ಹೊಸ ಅರ್ಥ ಅಲ್ಲದೆ ಪದಗಳೂ ಅನೇಕ ಹೊಸದಾಗಿಯೇ ಸೃಷ್ಟಿಯಾಗಿವೆ. ಅನೇಕ ಭಾಷೆಗಳಿಂದಲೂ ಮಾತುಗಳನ್ನು ತೆಗೆದುಕೊಂಡಿದಾರೆ. ಒಟ್ಟಿನಲ್ಲಿ ಇದೊಂದು ಪ್ರಶಂಸನೀಯವಾದ ಪ್ರಯೋಗ. ಪುಸ್ತಕದ ಒಳರೂಪ, ಹೊರರೂಪಗಳು ಅಚ್ಚುಕಟ್ಟಾಗಿಯೂ ಅಚ್ಚು ಅಂದವಾಗಿಯೂ ಇದೆ. ಕನ್ನಡ ಪುಸ್ತಕ ಭಂಡಾರಕ್ಕೆ ಅಗತ್ಯವಾಗಿ ಸೇರಿ ಕನ್ನಡಿಗರ ಮನಸ್ಸನ್ನು ಒಲಿಸಿ ಆಕರ್ಷಿಸಿ, ಅನುಕರಿಸುವ ಆಸೆಯನ್ನುಂಟು ಮಾಡಬಲ್ಲ ಶಕ್ತಿ ಇದರಲ್ಲಿ ಅಪಾರವಾಗಿದೆ.

—ಕೆ. ಎಂ. ಕೃ.



ಇಜ್ಜಿಲು ಮೂಟೆ ಕೊಂಡ ಮೇಲೆ, ಪ್ರಾಮ್ ಕೂಡ ಹಿಂದೆ
ನಡೆಸಿಕೊಂಡರೇ ಲಾಭ.

# ಪರಂಪರೆ

---

ಊರು ಸಿಕ್ಕರೂ, ಇಳಿಯುವುದಕ್ಕೆ ಜಾಗ ಸಿಕ್ಕದು. ರೈಲಿನೊಳಗೆ ಅಷ್ಟು ಜನ; ಹೊರಗೂ ಅಷ್ಟು ಜನ. ಇಳಿದ ಮೇಲೆ ಹತ್ತಿರೋ, ಇಳಿಯುವವರಿಗೆ ಜಾಗ ಕೊಡಿರೋ, ಯಾಕ್ರೋ ಹೀಗೆ ಕುರಿ ಮಂದೆಯ ಹಾಗೆ ನುಗ್ಗುತ್ತೀರಿ, ಎಂಬ ಕೂಗು. ಒಳಗಿಂದ ಹೊರಕ್ಕೆ ಬರುವ ಟ್ರಂಕು ಹಾಸಿಗೆಗಳಿಗೂ, ಹೊರಗಿಂದ ಒಳಕ್ಕೆ ನುಗುವ ಗಂಟು ಮೂಟೆಗಳಿಗೂ ಬಾಗಿಲಲ್ಲೇ ಹಣಾಹಣಿ.

ಇಂಥ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಕೃಷ್ಣಸ್ವಾಮಿಯ ಪರ್ಸನ್ನು ಯಾವನೋ ಜಾಣ ಹಾರಿಸಿದ್ದೇನೂ ಆಶ್ಚರ್ಯವಲ್ಲ. ಟಿಕೇಟ್ ಕೊಟ್ಟು, ಈಚೆ ಬಂದು, ಜಟಕ ಗೊತ್ತುಮಾಡಿ, ಮನೆ ಬಾಗಿಲಿಗೆ ಬಂದಾಗ, ಅಳಿಯದೇವರಿಗೆ, ತಿಳಿಯಿತು, ಪರ್ಸ್ ನಾಪತ್ತೆಯಾದದ್ದು. ಮೂವತ್ತೆರಡು ರೂಪಾಯಿ ನಗದು, ಮಗುವಿಗೆ ಎಂದು ತಂದಿದ್ದ ಉಂಗುರ ಬೆಳ್ಳಿ ನೂಲು, ಇಷ್ಟೂ ಕಳ್ಳನ ಪಾಲು.

ರಸ್ತೆ ಮಧ್ಯದಲ್ಲೇ ಜನರ ಗುಂಪು ಸೇರಿತು. ಹೇಗೆ ಹೋಯಿತು, ಏನೇನಿತ್ತು, ಯಾವ ಕಿಸೆಯಲ್ಲಿತ್ತು, ಎಂಥ ಬಣ್ಣದ ಪರ್ಸು, ಎಲ್ಲಿ ಕೊಂಡು ಕೊಂಡದ್ದು, ಎಂಬ ತಪಶೀಲುಗಳನ್ನು ಕೃಷ್ಣಸ್ವಾಮಿಯೂ ಅವನ ಮಾವನವರೂ ಸಭಿಕರಿಗೆ ವಿವರಿಸುತ್ತಿದ್ದರು. ಅದನ್ನೆಲ್ಲಾ ಬರೆದು ಪೋಲೀಸಿನವರಿಗೆ ಕೊಡಬೇಕೆಂದು ಪಕ್ಕದ ಮನೆ ರಾಮರಾಯರು ಸೂಚನೆ ಇತ್ತು, ಅಳಿಯನ ಪೆನ್ನಿಂದಲೇ, ಜಟಕಾದೊಳಗೆ ಕಾಗದವನ್ನಿರಿಸಿ, ಬಿರು ಬರನೆ ಬರೆದರು.

ಮನೆಯೊಳಗೆ ಹೋಗಿ, ಕೋಟು ಬಿಚ್ಚಿ, ಕಾಫಿ ಕುಡಿಯುವಾಗ ಪತ್ತೆ ಆಯಿತು, ಆ ಮನುಷ್ಯ ಪೆನ್ನು ವಾಪಸ್ ಮಾಡಲಿಲ್ಲ, ಎಂದು. ಹೊಸ ಪೆನ್ನು, ಪಾರ್ಕರ್, ಮದುವೆಯಲ್ಲಿ ಮಾವ ಕೊಟ್ಟದ್ದು. ಊಟದ ಹೊತ್ತಿನಲ್ಲಿ, ಆತ ಬಂದು, ಬೆಳಗಿನ ಗುಂಪಲ್ಲಿ ಯಾರೋ ಆ ಪೆನ್ನನ್ನು ಹೊಡದೇ ಬಿಟ್ಟರಲ್ಲೋ ಅಂತ ಕಣ್ಣೀರಿಟ್ಟರು.

ಸಂಜೆ ಕೃಷ್ಣಸ್ವಾಮಿ ಸಿನಿಮ ಮಂದಿರದ ಮುಂದೆ ರಿಕಾರ್ಡು ಕೇಳುತ್ತಾ ಇದ್ದ. ಹಳೆಯ ಸ್ನೇಹಿತನೊಬ್ಬ 'ಏನಯ್ಯ! ಪರ್ಸು ಹೋಯ್ತಂತೆ? ಎಲ್ಲಿಟ್ಟುಕೊಂಡಿದ್ದೆ'

ಎಂದು ಸಹತಪಿಸಿದ, ಸೈಕಲಿಂದ ಇಳಿದು ನಿಂತು. "ಹೋಗಲಿ, ಬಿಡು, ಚಿಂತೆ ಮಾಡಬೇಡ" ಎಂದು ಹೇಳುತ್ತ, ಮತ್ತೆ ಸೈಕಲ್ ಹತ್ತಿದಾಗ ತಿಳಿಯಿತು ಆತನಿಗೆ, ಕ್ಯಾರಿಯರ್ ಮೇಲೆ ಕಟ್ಟಿರಿಸಿದ್ದ ಎಂಟು ಗಜ ಷರ್ಟಿನ ಬಟ್ಟೆಯನ್ನ ಯಾರೋ ಹಾರಿಸೇ ಬಿಟ್ಟರು, ಅಂತ.

ಇಬ್ಬರೂ ನಡೆದರು, ಪೋಲೀಸ್ ಸಬ್ ಇನ್ಸ್ಪೆಕ್ಟರ ಕಡೆ. ರಸ್ತೆಯಲ್ಲೇ ಸಿಕ್ಕರು. ಸಬ್ ಇನ್ಸ್ಪೆಕ್ಟರಿಗೆ ತುಂಬ ಕೋಪ ಬಂತು. "ಊರಲ್ಲೆಲ್ಲ ತುಂಬ ಹೆಚ್ಚಿಹೋಗಿದ್ದಾರೆ, ಒಳ್ಳೆ ಜಂಟಲ್‌ಮನ್ನುಗಳ ಹಾಗೆಯೇ ಕಾಣುತ್ತಾರೆ, ಯಾವುದೋ ಕಳ್ಳತನ ಕಲಿಸುವ ಕಾಲೇಜೇ ಇರುವ ಹಾಗೆ ಕಾಣುತ್ತೆ, ಯಾವನಾದರೂ ಸಿಕ್ಕಿದರೆ, ಚಚ್ಚಿ ಚಚ್ಚಿ...." ಅಂದರು, ಕೊಂಕುಳಲ್ಲಿ ದೊಣ್ಣೆಯೇ ಇಲ್ಲ! ನಾಪತ್ತೆ!

ಹೀನಾ ಮಾನಾ ಬೈದರು, ಎಲ್ಲರನ್ನೂ, ಆ ಕೋಪದಲ್ಲಿ, ಸಬ್ ಇನ್ಸ್ಪೆಕ್ಟರು. ಅದನ್ನು ಕೇಳಿ, ಇನ್ಸ್ಪೆಕ್ಟರ್ರವರೇ ಅಲ್ಲಿಗೆ ಧಾವಿಸಿ ಬಂದು, ಎಲ್ಲವನ್ನೂ ವಿಚಾರಿಸಿ, ಕಿಡಿ ಕಿಡಿಯಾದರು. "ಈ....ಮುಕ್ಕಳನ್ನ ಜೈಲಿಗೆ ಕಳುಹಿಸದೆ ಇದ್ದಲ್ಲಿ, ನಾನು...." ಎನ್ನುತ್ತ, ಬಲಗೈಯನ್ನು ಮೀಸೆ ಕಡೆ ಎತ್ತಿದರು.

ಮೀಸೆಯೇ ಮಂಗಮಾಯ!

—ಪಾಟಾಳಿ.

—o—



ಇನ್ನೊಂದು ಮದುವೆ ಯೋಗವಿದೆ! ಸ್ವಾಮಿ!!

# ಕೀಟ ನೋಟ

ಭೂತ ಗಾಜ ಕೆಳಗಡೆ, ಕೃಮಿಯನಿರಿಸಿ ನೋಡಿದೆ,
ನೂರು ಸಾಲು ಹಲ್ಲಿದೆ—ಗರಗಸವೇ ಮೂಡಿದೆ!
ಸೂಜಿಯಂತೆ ನಾಲಗೆ, ಗೆಜ್ಜೆ ಬೇರೆ ಸುತ್ತಿದೆ,
ಮೀಸೆ ತುತ್ತ ತುದಿಯಲಿ ರಂಗು ಬಳಿದ ಮುತ್ತಿದೆ!
ಹಸುರು ಹುಬ್ಬು ಬಾಗಿದೆ, ಹಳದಿ ಬೆನ್ನು ನೆಟ್ಟಗೆ
ಬಸುರಿ, ಪಾಪ,! ಆದರೂ, ಹೊಟ್ಟೆ ಚಿಕ್ಕ ಪೆಟ್ಟಿಗೆ!

*                    *                    *

ಅರರೆ! ನರರ ರಕ್ತವೇ, ತುಂಗೆ ಗಂಗೆ ಕೀಟಕೆ!
ವಸತಿ, ವಸನ, ಸ್ನಾನ ಪಾನ ಎಲ್ಲ ನಾವೇ ಊಟಕೆ!
ಒಳಗೆ ತೂರಿ, ಜೀವ ಹೀರಿ—ಬೆಳಿಸಿದವಗೇ ಮಾರಕ!
ಎಂಥ ಕಟುಕ! ಏನು ರೂಪು! ನಯನಮನೋ ಮೋಹಕ!

—ನಾ. ಕ.

—o—



ಪಂಚ ವಾರ್ಷಿಕ ಯೋಜನೆಯಲ್ಲಿ ಭಾರೀ ಹುದ್ದೆ ಗಿಟ್ಟಿಸಬೇಕು ಅಂತ
ಆಸೆ ಪಡುತ್ತಾನೆ ನೋಡು! ಇವ!!

# ಸೂಸಿ

ಸುಶೀಲ ಬೆಂಚಿನ ಮೇಲಿಂದ ಕೆಳಕ್ಕಿಳಿದಳು....ಹೊಸದಾಗಿಬಂದ ಕ್ಯಾಲೆಂಡರುಗಳ ಪೈಕಿ, ದೇವರ ಪಠಗಳನ್ನೂ ಸಿನಿಮ ತಾರೆಯರ ಅರೆಬೆತ್ತಲೆ ಚಿತ್ರಗಳನ್ನೂ ತೆಗೆದಿರಿಸಿ, ಸೂರ್ಯೋದಯ ಕಾರ್ವೋಡ ದೋಣೀವಿಹಾರ ಇವು ಮೂರನ್ನು ಮಾತ್ರ ಆರಿಸಿ, ಅವಳು ಮನೆಯ 'ಹಾಲ್'ನಲ್ಲಿ ಮೊಳೆ ಹೊಡೆದು ತೂಗಿಸಿದಳು. ಮನೆಯ ಅಂದವನ್ನು ಹೆಚ್ಚಿಸುವ ಶಾಸ್ತ್ರದಲ್ಲಿ ಅವಳು ತುಂಬ ಪ್ರವೀಣೆ. ಅಂದಹಾಗೆ, ವೀಣೆ ಬಾರಿಸುವುದರಲ್ಲಿ, ಅವಳು ಪ್ರವೀಣಳೇ. ಆಳು ಮಾಡಿದ ಕೆಲಸ ಹಾಳು; ಮುಖ್ಯವಾಗಿ, ಮೇಜು ಕುರ್ಚಿ ಸೋಫ ಸ್ಕ್ರೀನ್, ಇವುಗಳನ್ನು ನಯನಮನೋಹರವಾಗಿ ಮಾಡಲು ಆಳುಗಳನ್ನು ನಂಬಿದರೆ, ಅವಲಕ್ಷಣವೇ ಗತಿ.

ಕೆಳಗಿಳಿದ ಐದೇ ನಿಮಿಷಗಳಲ್ಲಿ, ಅವಳು ಒಂದು ಫೋಟೋವನ್ನು ರೇಡಿಯೋ ಮೇಲಿರಿಸಿ, ಹೂವಿನ ಹೂಜಿಯನ್ನು ಪುಸ್ತಕದ ಷೆಲ್ಫಿನಮೇಲಿಟ್ಟು, ಗಂಡನ ಸಿಗರೇಟ್ ಬೂದಿ ಬಟ್ಟಲನ್ನು ಸೋಫಾದ ಬಲಗೈಯಲ್ಲಿರಿಸಿ, ರಗ್ಗನ್ನು ಮುಂದಕ್ಕೆಳೆದು, ಕಿಟಕಿ ಸ್ಕ್ರೀನನ್ನು ಸರಿಸಿ, ಟೇಬಲ್ ಲ್ಯಾಂಪ್ ಷೇಡನ್ನು ಕೊಂಚ ಕೆಳಕ್ಕೆ ವಾಲಿಸಿ, ಅದೇ ಕೋಣೆಯನ್ನು ಬೇರೊಂದಾಗಿ ಮಾರ್ಪಡಿಸಿದಳು.

ಸುಸ್ತಾಗಿ ಕುರ್ಚಿಯೊಳಕ್ಕೆ ಕುಸಿದಳು. ಎಷ್ಟು ಶ್ರಮಿಸಿದರೂ, ಬಾಡಿಗೆ ಮನೆ ಬಾಡಿಗೆ ಮನೆಯೇ. ಕಿಟಕಿಗಳೆಲ್ಲ ತಗ್ಗು; ಬಾಗಿಲುಗಳಿಗೆ ಅಗಲ ಸಾಲದು; ನೆಲ ಡೊಂಕು; ಹೆಂಚಿನ ಸೂರು....ಸ್ವಂತ ಮನೆ ಒಂದನ್ನು ಕಟ್ಟಿಸಿ,........

ಆಗ,....ಶಿವಸ್ವಾಮಿ ಬಂದ. ಅವನ ತಾಪತ್ರಯ ಅವನಿಗೆ. ಆಫೀಸಿನಲ್ಲಿ ಅವಾಂತರ; ಪೇಪರಲ್ಲಿ ಅದರ ವಿಷಯ ಟೀಕೆ; ಮೂರು ಗುಮಾಸ್ತೆಯರು ರಜ; ಸಾಹೇಬರ ಅಮ್ಮಾವರಿಗೆ ಆಸ್ಪತ್ರೆಯಲ್ಲಿ ಆಪರೇಷನ್!

"ಹುಂ" ಎಂದ. ನೆಟ್ಟಗೆ, ತನ್ನ ರೂಮಿಗೆ ಹೋಗಿ, ಕೋಟು ಕಳಚಿ ತೂಗುಹಾಕಿದ. ಷೂ ಎರಡನ್ನೂ, ದಾರ ಸಡಿಲಿಸಿ, ಮೂಲೆಗೆ ಒದ್ದ....ದಿನವೂ ಅವನು ಮಾಡುತ್ತಿದ್ದದ್ದೇ ಹಾಗೆ; ಕುತ್ತಿಗೆಯಿಂದ ಟೈಯನ್ನು ಎಳೆದು ಮೇಜಿನಮೇಲಕ್ಕೆಸೆದ....ಮುಖವನ್ನು ಇಷ್ಟು ದಪ್ಪ ಮಾಡಿಕೊಂಡು, ಸೋಫಾದಲ್ಲಿ ಕುಕ್ಕರಿಸಿ, ಸಿಗರೇಟ್ ಹಚ್ಚಿದ, ಪೇಪರ್ ಹುಡುಕುತ್ತ.

"ಏನೇನು ಮಾಡಿದೆ, ಇವತ್ತು?", ಎಂದ. "ಸೂಸಿ!" ಎಂದು ಹೇಳಲಿಲ್ಲ.

ಸುಶೀಲನಿಗೆ ಗೊತ್ತು, ಅವನು ಆ ಪ್ರಶ್ನೆ ಕೇಳೇ ಕೇಳುತ್ತಾನೆ, ಎಂದು. ಅದಕ್ಕಾಗಿಯೇ, ಅವಳು ಉದ್ದನೆಯ ಒಂದು ಪಟ್ಟಿಯನ್ನೇ ತಯಾರಿಸಿ, ಉತ್ತರವನ್ನು

ಐದಾರು ಬಾರಿ ತನಗೆ ತಾನೇ ಅಂದು ಸಿದ್ಧಮಾಡಿಕೊಂಡಿದ್ದಳು. "ನೋಡಿ, ಅಂದ್ರೆ! ಸೊಸೈಟಿಗೆ ಹೋಗಿದ್ದೆ; ಅಲ್ಲಿ ಆ ಹೊಸದಾಗಿ ಬಂದಿದಾರಲ್ಲಾ, ರೇಷನ್ ಆಫಿಸರ್, ಅವರ ಹೆಂಡತಿ, ನೀಲಿ ಸೀರೆ ಉಟ್ಟುಕೊಂಡು ಆವತ್ತು ಅರಶಿನ ಕುಂಕುಮಕ್ಕೆ ಕರೆಯುವುದಕ್ಕೆ ಬಂದಿದ್ದಳಲ್ಲಾ, ಅವಳು, ಆ ಗುಮಾಸ್ತೆಯನ್ನ ಯದ್ವಾತದ್ವಾ ಬೈದೇ ಬಿಟ್ಟಳಲ್ಲಾ, ಅಂದ್ರೆ....ಆಮೇಲೆ, ಸೊಸೈಟಿಯಿಂದ ಬರುತ್ತ, ಆ ಟೈಲರ್ ಅಂಗಡಿ, ಅವನು ಆ ಬ್ಲೌಸ್ ಕೊಡಲೇ ಇಲ್ಲ...ನಾಳೆ ನಾನು ಸಮಾಜಕ್ಕೆ ಹೋಗುವಾಗ.... " ಆದರೆ, ಶಿವಸ್ವಾಮಿ "ಸೂಸಿ" ಎಂದು ಸೇರಿಸಲಿಲ್ಲ.

"ಏನೂ ಇಲ್ಲ! ನೀವು?", ಎಂದಳು.

ದಿನವೂ, "ಏನೇನೂ ಮಾಡಿದೆ? ಇವತ್ತು! ಸೂಸಿ!" ಎಂದು ಅವನು ಕೇಳಬೇಕು; ತಕ್ಷಣ, ನಗುನಗುತ್ತ, ಮಲ್ಲಿಗೆ ಹೂವು ಚೆಲ್ಲಿದಹಾಗೆ ಮಂದಹಾಸ ಬೀರುತ್ತ, ಸುಶೀಲ ಹೋಗಿ, ಶಿವಸ್ವಾಮಿ ಪಕ್ಕದಲ್ಲಿ ಕೂತು,........ಹರಟಬೇಕು........ಇದು, ಮಾಮೂಲು,

"ಸೂಸಿ!" ಸೇರಿಸಲಿಲ್ಲ, ಅವನು. ಅವಳು ಏಳಲಿಲ್ಲ;. ಎದ್ದು ಸೋಫಾದಲ್ಲಿ ಕೂರಲಿಲ್ಲ. ದಿನವೂ, ತನ್ನ ವರದಿ ಒಪ್ಪಿಸಿದ ಮೇಲೆ, ಅವಳು, 'ನೀವು?' ಎನ್ನಬೇಕು. ಎಂದಾಗ, ಅವನು ಅರ್ಧಗಂಟೆ ತನ್ನ ಸಾಹಸಗಳನ್ನೆಲ್ಲ ಹೇಳಬೇಕು. ಅವತ್ತು ಅವನು ಹೇಳುವುದೂ ತುಂಬ ಇತ್ತು; ತಯಾರಾಗಿಯೇ ಬಂದಿದ್ದ. ಆದರೆ, ದೂರ ಕೂತು ಕೇಳಿದಳು.

"ಏನೂ ಇಲ್ಲ! ಹಿಂದೂ ಪೇಪರೆಲ್ಲಿ?"

ಶಿವಸ್ವಾಮಿ ಪೇಪರೋದುತ್ತ ಕೂತ. ಪೇಪರನ್ನು ತನ್ನ ಮುಖಕ್ಕೆ ಅಡ್ಡವಾಗಿ ಹಿಡಿದಿದ್ದ; ಅವನು ಓದಲಿಲ್ಲ. ಒಳಗಿಂದ. ಸಂಕಟ ಉಕ್ಕಿ ಬಂತು. ಕಣ್ಣಲ್ಲಿ ನೀರು ತುಂಬಿತು, ಏಕೆ ಇವತ್ತು ಹೀಗಾಯಿತು, ಎಂದು ತಿಳಿಯದೆ ತತ್ತರಿಸಿದ.

ಸುಶೀಲಳಿಗೆ ರೇಗಿತು. "ನನಗಿಂತ ಪೇಪರೇ ಹೆಚ್ಚಾಗಿಹೋಯಿತೆ?" ಎಂದು, ಅವಳು ತುಟಿ ಕಚ್ಚಿದಳು, ಕೋಪವನ್ನು ನುಂಗಿದಳು; ಅಳುತ್ತ ಕುಳಿತಳು.

ಶಿವಸ್ವಾಮಿ ಬೆಚ್ಚಿದ. "ಯಾಕೆ, ಸೂಸಿ!" ಎನ್ನುತ್ತ, ಪೇಪರನ್ನು ದೂರಕ್ಕೆ ಸೆದ. ಸುಶೀಲ ಓಡಿ ಬಂದು, ಸೋಫಾದಲ್ಲಿ ಕುಳಿತು, ಅವನ ಮೈಗೆ ಒರಗಿಕೊಂಡಳು.

"ನೋಡಿ ಅಂದ್ರೆ ಸೊಸೈಟಿಗೆ ಹೋಗಿದ್ದೆ" "ಇವತ್ತು ನಮ್ಮ ಸಾಹೇಬರ ಹೆಂಡತಿ" "ಹೊಸದಾಗಿ ಬಂದಿದಾರಲ್ಲಾ", "ಅದೇ, ಆಕೆಗೆ ಇದ್ದಕ್ಕಿದ್ದಹಾಗೆ" "ರೇಷನ್ ಆಫೀಸರ್" "ಸಂಕಟ ಹತ್ತಿಕೊಂಡು," ಅರಶಿನ ಕುಂಕುಮಕ್ಕೆ ಕರೆಯೋಣ ಅಂತ "ಆಸ್ಪತ್ರೆಗೆ ಸಾಗಿಸಿದರು, ಸೂಸಿ!"........

—ಶ್ರೀಮತಿ ಕೇಸರಿ.

# ಒಂದ್ ಕನ್ಸು

ಮುದ್ದೆ ವೊಡದು ಮಲಗಿದ್ದಂಗೆ
ಬಿತ್ ನನಗೊಂದು ಕನ್ಸು
ಪ್ರಾಣ ಕಳ್ಕೋಬೇಕು ಅಂತ
ಕನಸ್ನಲ್ಲಾಯ್ತು ಮನ್ಸು!

ಕೆರೆಯಾಗ್ ಬೀಳ್ತೀನಂದ್ಕೊಂಡ್ರೆ
ಚಳಿ—ಆಳ್ ಚಳಿ—
ಚಾಕ್ ಇಡದ್ ಕುಯ್ಕೋತೀನಂದ್ರೆ
ಸುಮ್ನೆ ಗಾಯ ನೋವು—
ಬೆಟ್ದಿಂದ್ ಬೀಳೋದ್ ವಾಸೀಂದ್ರೆ
ಯಾಕೋ ಕೊಂಚ ಬಯ—
ಇನಗಿಸ ತಿನ್ನೋದ್ ಲೇಸಂದ್ರೆ
ಇಸ್ಸೀ ಅಂತು ನಾಲ್ಗೆ—
ಗುಂಡ್ನೇ ಒಡ್ಕೊಂಬೌದ್—ಆದ್ರೆ
ಯಾಕ್ ಸುಮ್ಗೆ ಸದ್ದು?
ಯಾಕಪ್ಪ ಈಟ್ ತಾಪತ್ರೇಯ
ಅಂದ್ಬಿಟ್ ಆಕ್ದೆ ಪ್ಲ್ಯಾನ್!

'ಇದ್ಬಿಟ್ ಬದ್ಕೋದೇ ಸೊಗ್ಸು'
ಎಂಗಿದೆ ಈ ನನ್ ಪ್ಲ್ಯಾನ್
ಪ್ರಾಣಾ ಉಳೀತು ಓಡೋಯ್ತು ಕನ್ಸು
ಈವಾಗ್ ನಂಗೇ ನಾನ್!

—ಅಳ್ಳೀ ಗಮಾರ.

# ಬಿರುದು

ಮುಂದಿನ ಏಪ್ರಿಲ್ ಒಂದನೆಯ ತಾರೀಖಿನ ದಿನ, ನ್ಯೂಯಾರ್ಕ್ ನಗರದಲ್ಲಿ ಅಖಿಲ ರಾಷ್ಟ್ರ ಪೈಪೋಟಿಯೊಂದು ನಡೆಯಲಿದೆ ಎಂದು ಪತ್ರಿಕೆಯಲ್ಲಿ ನೋಡಿದೆ. ಎಷ್ಟು ಹೊತ್ತು ಯಾರು ಉದ್ದಕ್ಕೂ ನಗಬಲ್ಲರು, ಎಂದು ಪತ್ತೆ ಹಚ್ಚಿ, ಹಾಗೆ ನಕ್ಕವರಿಗೆ "ನಗುವೀರ" ಎಂಬ ಬಿರುದನ್ನೂ ಲಕ್ಷ ರೂಪಾಯಿ ಬಹುಮಾನವನ್ನೂ ಕೊಡುವರಂತೆ.

ಇದಕ್ಕಾಗಿ, ಡಿಕ್ ಕಾಲಿಯರ್ ಎಂಬ ಅಮೇರಿಕನ್ ಯುವಕ ಹಗಲಿರುಳೂ ತರತರದ ನಗುವನ್ನು ಅಭ್ಯಾಸಮಾಡುತ್ತಿರುವನಂತೆ. ಉದ್ದಕ್ಕೂ ಗೊಳ್ ಅಂತ ಅಟ್ಟಹಾಸವಾಗಿ ನಗುವುದೆಂದರೆ, ಪಕ್ಕೆ ನೋವು ಬಂದು, ಗಂಟಲೊಣಗಿ, ನಾಲಗೆ ಸಿಕ್ಕಿ, ಪ್ರಾಣವೇ ಹಾರಿಹೋಗುವುದರಿಂದ, ದೇಹಶ್ರಮವನ್ನು ಹೆಚ್ಚು ಕೊಡುವ ಬಗೆ ಬಗೆಯ ನಗೆಯನ್ನೇ ಅಳವಡಿಸಿಕೊಳ್ಳಬೇಕಾಗಿ ಬರುತ್ತದೆ ಎಂದು ಆತ ಹೇಳಿಕೆ ಕೊಟ್ಟಿದ್ದಾನೆ. ಏಪ್ರಿಲ್ ಒಂದನೆಯ ತಾರೀಖಿನ ಸೂರ್ಯೋದಯದಿಂದ ಒಂನೆ ಸೂರ್ಯಾಸ್ತಮದವರೆಗೆ ಒಂದೇ ಸಮನೆ ನಗಬಹುದೆಂದೂ ಬಹುಮಾನವನ್ನು ಗಿಟ್ಟಿಸಬಹುದೆಂದೂ ಭರವಸೆ ಇಟ್ಟಿದಾನೆ. .

ಯೋಗಾಸನಗಳಿಂದ ಆರೋಗ್ಯವನ್ನೂ, ಧ್ಯಾನದಿಂದ ಮನಶ್ಶಾಂತಿಯನ್ನೂ, ಹಾಸ್ಯಪತ್ರಿಕೆಗಳ ಪಠನದಿಂದ ನಗು ಉಕ್ಕಿಸುವ ಕಥೆಗಳ ಸಾಮಗ್ರಿಯನ್ನೂ, ಆತ ಗಳಿಸುತ್ತಿರುವುದಾಗಿ ವರದಿಯಾಗಿದೆ.

ಈ ಸ್ಪರ್ಧೆಯಲ್ಲಿ ಭಾಗವಹಿಸಲು ಸಾಹಸಪಡುವವರು ಯಾವ ರಾಷ್ಟ್ರದವರೇ ಆಗಲಿ, ಇಂಡಿಯಾ ದೇಶದವನೊಬ್ಬ ಪ್ರವೇಶಮಾಡಿದರೆ, ಅವನಿಗೆ ಸೋಲಲೇ ಬೇಕೆಂದು ನಾವು ಧೈರ್ಯವಾಗಿ ಹೇಳಬಯಸುತ್ತೇವೆ.

ಏಕೆಂದರೆ, ಭಾರತೀಯರಿಗೆ ಯೋಗಾಸನ ಆಜನ್ಮಸಿದ್ಧ, ರೈಲುಗಳಲ್ಲೂ ಬಸ್ಸುಗಳಲ್ಲೂ ಅದನ್ನ ಹಾಕದೆ ಇದ್ದರೆ, ವಿಧಿ ಇಲ್ಲ. ಧ್ಯಾನವಂತೂ, ನಮ್ಮ ಜಾತಕದಲ್ಲೇ ಇದೆ. ಅಕ್ಕಿ ಮೇಲೆ ಧ್ಯಾನ, ಗ್ರೇಡಿನ ಮೇಲೆ ಧ್ಯಾನ, ಜಾತಿ ಮೇಲೆ ಧ್ಯಾನ, ಪಾಸಿನ ಮೇಲೆ ಧ್ಯಾನ, ಪ್ಲಾನಿನ ಮೇಲೆ ಧ್ಯಾನ, ಪ್ರಾಣದ ಮೇಲೆ ಧ್ಯಾನ, ಹೀಗೆ ನಾವೆಲ್ಲ ಸದಾಧ್ಯಾನಪರರು.

ಇನ್ನು, ನಗುವನ್ನು ಉಕ್ಕಿಸುವ ಕಥಾ ಸಾಮಗ್ರಿ ಏಕೆ, ಸನ್ನಿವೇಶ ಸಾಮಗ್ರಿ ನಮ್ಮ ದೇಶದಲ್ಲಿರುವಷ್ಟು ಪ್ರಪಂಚದ ಯಾವ ದೇಶದಲ್ಲಿದೆ? ಐದು ವರ್ಷದ ಪ್ಲಾನನ್ನು ಮೂರು ವರ್ಷದಲ್ಲಿ ಜಯಪ್ರದವಾಗಿ ಮುಗಿಸಿ ಇತರೇ ದೇಶಗಳು ಕೀರ್ತಿಗಳಿಸಿದರೆ, ನಾವು ನಮ್ಮ ಪಂಚ ವಾರ್ಷಿಕ ಯೋಜನೆಯನ್ನು ಪ್ರಕಟಿಸುವ ದಿನವೇ, ಆಗಲೇ ಅದರ ಎರಡು ವರ್ಷಗಳು ಮುಗಿದು ಹೋಗಿವೆ, ಎಂದು ಘೋಷಣೆ ಮಾಡುತ್ತಿದೇವೆ. ಪಾರ್ಲಿಮೆಂಟ್ ಪದ್ಧತಿಯನ್ನು ದೇಶವೇ ಒಪ್ಪಿಕೊಂಡು ಅದರಂತೆ ಪ್ರಜಾ ಪ್ರತಿನಿಧಿ ಸಭೆಗಳು ಕೆಲಸ ಮಾಡುತ್ತಿರುವಾಗ, ಆಡಳಿತದ ಮನತಿರುಗಿಸಲು ವೋಟಿನ ಅಸ್ತ್ರವಿರುವಾಗ, ಏಳುದಿವಸ ಹದಿನಾಲ್ಕು ದಿವಸ ಉಪವಾಸ ಹೂಡಿಕೊಟ್ಟಾಂತರ ಜನರ ಭವಿಷ್ಯವನ್ನು ಇತ್ಯರ್ಥಗೊಳಿಸಲು ಪ್ರಯತ್ನಿಸುತ್ತಿದೇವೆ. ಕಂದಾಯ ಕೊಡುವುದಕ್ಕೆ ನಿರಾಕರಿಸುವ ಜನರೇ ಸುಲಭ ಬೆಲೆಗೆ ಪದಾರ್ಥಗಳನ್ನು ಸರ್ಕಾರ ದೊರಕಿಸಬೇಕೆಂದು ಹಾಹಾಕಾರ ಮಾಡುವರು. ಇಂಗ್ಲೀಷರನ್ನೋಡಿಸಿದ ಮೇಲೂ ಇಂಗ್ಲೀಷೇ ಬೇಕು ಎಂದು ಜಗಳ ಹೂಡುವರು. ಹಳೇ ರಸ್ತೆಗಳಿಗೆ ಹೊಸ ಹೆಸರನ್ನಿಟ್ಟು, ರಾಷ್ಟ್ರಪಿತನಿಗೆ ಅದೇ ತಕ್ಕ ಸ್ಮಾರಕ ಎಂದು ಕುಣಿಯುವರು. ಮಾತು ಸಾಕು ಕೃತಿ ಬೇಕು, ಎಂದು ಗಂಟೆ ಗಟ್ಟಲೆ ಮಾತನಾಡುವರು. ಗಂಡು ಹೆಣ್ಣು ಸಮ, ಎನ್ನುತ್ತ, ಹೆಣ್ಣಿಗೆ ಆಸ್ತಿ ಹಕ್ಕು ಕೊಟ್ಟರೆ, ಕೊಟ್ಟವರ ಕಣ್ಣಿಗೆ ಮೆಣಸಿನ ಪುಡಿ ಎಸೆಯುವರು, ಗುಂಡು ಸೂಜಿ ಮಾಡುವ ವಿಧಾನವನ್ನು ಅರಿಯದವರು ನೆರೆ ರಾಷ್ಟ್ರದಮೇಲೆ ಯುದ್ಧ ಹೂಡಿರೋ ಎಂದು ಕೂಗುವರು.

ಈ ವಿಷಯಗಳಲ್ಲಿ ಒಂದೊಂದನ್ನು ನೆನೆದರೂ, ತಿಂಗಳುಗಟ್ಟಲೆ ನಗಬಹುದು, ಅಂಥದ್ದರಲ್ಲಿ, ನಮ್ಮ ದೇಶದ ಸ್ಥಿತಿಗತಿಯನ್ನರಿತವರು ಯಾರಾದರೊಬ್ಬರು ನ್ಯೂಯಾರ್ಕಿಗೆ ಹೋದರೆ, ಆ ಬಹುಮಾನವೂ ಬಿರುದೂ, ಅವರಿಗೆ ಮೀಸಲು ಎಂಬುದರಲ್ಲಿ ಸಂದೇಹವೇನಿದೆ?

—ಕಾಮತ್.

—o—

ಸಂಕ್ರಾಂತಿ ಹಬ್ಬದ ಎಳ್ಳು ಬೀರಿಕೆಯ ಐದುವರ್ಷದ ನಷ್ಟ



# ತೂತು

## [ ಕವನ! ]

ತೂತು!
ನಗುವಿರದೇಕೆ?
ನೋಡಿದಿರಾ? ನಕ್ಕೊಡನೆಯೇ ಕಂಡವು
ಹಲ್ಲು ಹಲ್ಲುಗಳ ನಡುವಣ ತೂತು!
ನಗಬೇಡಿರಿ! ಕೇಳಿಲ್ಲವೆ? :
'ಎಲ್ಲರ ಮನೆ ದೋಸೆಯು ತೂತು!'
'ಮನೆಯನು ಕೆಡಿಸಿತು ಮಾತು
ಒಲೆಯನು ಕೆಡಿಸಿತು ತೂತು'
ಎನ್ನುವ ಪಳವಾತು
ಸುಳ್ಳೇ ಸುಳ್ಳು!
ಎಷ್ಟೆಷ್ಟೋ ಗಾದೆಗಳೊಲು
ಇದರೊಳಗೂ ಇಲ್ಲವು ತಿರುಳು; ಬರಿಜೊಳ್ಳು!
ಮಾತನಾಡಿ ಆಡಿ
ಮಾತಿನಲೇ ಜನಕೆಲ್ಲಕು ಮನೆಕಟ್ಟಿ
ವೋಟುಗಳನೆ ಬೇಡಿ
ಮಂತ್ರಿಗದ್ದುಗೆಯನೇರಿ, ತಮಗೇ ಮನೆಕಟ್ಟಿ—
ಸಿಕೊಂಡರು ಎಷ್ಟೋ ಜನ.
ಮನೆಕೆಡಿಸಿತೆ ಮಾತು? [ಉತ್ತರ: ನ! ನ!]
'ಮನೆಕೆಟ್ಟಿಲ್ಲವೆ' ಎಂದಿರ? ನಿಜ! ಯಾರದು?
ಆ ಮಾತನು ಕೇಳಿದ ಜನ,–ಊಹ್ಞ್!–ಜಾನುವಾರಿನದು!
ಕಾರಣ ಕೇಳಿದಿರಾ? ತಿಳಿಯದೆ ಭೂಪ?
ಕೇಳಿದವನಿಗೇ ಆಡಿದ ಪಾಪ!
ಅದರಂತೆಯೆ,
ತೂತೆಂದೆಂದಿಗು ಕೆಡಿಸದು ಒಲೆಯ
ತೂತಿಲ್ಲದೆ ಕಟ್ಟಿಗೆಯುಗುಳುವ ಹೊಗೆಯ

ಹೊರಕಳಿಸುವುದೆಂತು!
ಅವಕೇ ಎಂದುದು, ಈ ಮಾತೇ ಭ್ರಾಂತು!
ಹೇಳುತಿದ್ದಳು ಕಥೆಯ ಕೇಳಿ ನಮ್ಮವ್ವ:
ಚಿತ್ರದುರ್ಗದ ವೀರ ಮಹಿಳೆ ಓಬವ್ವ
ನೀರು ತರಲೆಂದು ನಡೆದಿರಲು ಹೊಳೆಗೆ
ನೋಡಿದಳು, ಕೋಟೆಯಲ್ಲಿದ್ದೊಂದು ಗುಪ್ತ ತೂತಿನೊಳಗೆ
ಕೋಟೆಯನು ಜಯಿಸಲಾಗದ ಅರಿಯ ಸೇನೆ
ನುಗ್ಗಲೆತ್ನಿಸುತಿಹುದ! ಆಗಲಾ ಮಹಿಳೆ ತಾನೆ
ಆ ಸಣ್ಣ ತೂತ ಬಳಿ ಒನಕೆಯನು ಹಿಡಿದು
ನಿಂತಳರರೇ! ಮಾರಿಯೊಲು! ಕಡಿಕಡಿದು
ಒಳಗೆ ತಲೆಯಿಕ್ಕಿಬಹ ಒಬ್ಬೊಬ್ಬ ಭಟರನ್ನು!
ಇಂತು ಗೆದ್ದಳು ಅರಿಯ ದಾಳಿಯನು ಹೆಣ್ಣು!
ಇಂದಿಗೂ ಹೆಸರಾಗಿ ನಿಂತಿರುವುದಾ ತೂತು.
ಮತ್ತೊಂದು ಕತೆ ನೆನಪಿನೊಳಗೆ ನುಗ್ಗಿದೆ, ನೋಡಿ.
ಸಂತಕವಿ ಕನಕ ದೇವರನು ಹಾಡಿ
ಬಂದನೊಮ್ಮೆಗೆ ಉಡುಪಿ ಕೃಷ್ಣದೇಗುಲಕೆ.
ಬಿಡಲಿಲ್ಲ ಒಳಗವನ. 'ತೆರವಿಲ್ಲ ಕೀಳು ಕುಲಕೆ'
ಎಂದು ತಡೆದರು. ದೇಗುಲದ ಬದಿಗೆ ನಿಂತು
ಹಾಡಿದನು ಸಂತ. ಕೇಳಿದನು ಕಂತು—
ಪಿತ. ತಿರುಗಿದನು ನಿಂತ ಪೀಠದಲಿ
ಗರ್ ರ್ ರ್‌ರಕ್ಕನೆ! ಗೋಡೆಯಲಿ
ತೂತು ಬೀಳುವೊಲು ಕರುಣಿಸಿದನಾ ದೇವ.
ಆ ತೂತಿನಲಿ ಕನಕನಿಣುಕಿದ, ದೇವದರ್ಶನವ ಪಡೆದ.
ನೋಡಿದಿರಾ? ತೂತಿನಿಂದಲೆ ದೇವದರ್ಶನ!
ಅದಕಿಂದಿಗೂ ಇಹುದು ಉಡುಪಿಯಲಿ ನಿದರ್ಶನ!
ಅಂತೆಯೇ ಪೇಳುವೆನು ತೂತಿಂಗೆ ಸ್ವಸ್ತಿ!

ಕಂದ|| ಎಲೆ ತೂತೆ! ನಿನ್ನಗುಣಮಂ
ಸಲೆ ತಿಳಿಯದೆ ಹಳಿಯುವ ಖಳ ಜನಮುಂದನಮಂ
ತಲೆಯಿಲ್ಲದ ಮೃಗಗಳಿವೆಂದರಿಯುತೆ
ದಲ್‌ಕೆಮ್ಮನೆ ತವ ಜಯಮಂಪಾರುವೆಂ ಸತತಂ ||

—ಬುಸ್ಸಣ್ಣ.

# ಧನುರ್ಮಾಸದ ಪೂಜೆ

ನಮ್ಮೂರು ವೆಂಕಟರಮಣದೇವರ ದೇವಸ್ಥಾನದಲ್ಲಿ ಈ ವರ್ಷ "ಧನುರ್ಮಾಸದ ಪೂಜೆ (ನಿಮಗೆ ಅರ್ಥವಾಯ್ತೆ ?) ಪ್ರತಿ ವರ್ಷಕ್ಕಿಂತ ಬಲು ಜರ್ಬಾಗಿ ನಡೀತಿದೆ. ಮುಖ್ಯವಾಗಿ ಶಾಸ್ತ್ರೋಕ್ತವಾಗಿ ನಡೀತಿದೆ. ರಗ್ಗಿನಮೇಲೆ ರಗ್ ಹೊದ್ಕೊಂಡು ಕಿಟ್ಕಿಬಾಗ್ಲೆಲ್ಲ ಮುಚ್ಚಿ ಮಲಗಿರೋ ನನ್ನನ್ನ ದೇವಸ್ಥಾನದ ಘಂಟೆ ಹೊಡದೆಬ್ಬಿಸುತ್ತದೆ. ಆಗ ನಾನು ರಾಮಾಭಟ್ಟನನ್ನು ಹೊಗಳಿ ಅವನ ದೈವಭಕ್ತಿಯನ್ನು ಮನಸ್ಸಿನಲ್ಲೇ ಕೊಂಡಾಡಿ ಬಿಗಿಯಾಗಿ ಹೊದ್ದುಕೊಂಡು ಹಾಯಾಗಿ ನಿದ್ದೆ ಹೋಗುತ್ತೇನೆ. ಎಷ್ಟೋ ಹೊತ್ತಿನ ಮೇಲೆ ಬೆಳಕು ಹರಿದು ಬಿಸಲು ಹತ್ತಿದ ಮೇಲೆ ನಾನು ಏಳೋದು. ಎಷ್ಟೋ ದಿವಸ, ದೇವಸ್ಥಾನದ ಘಂಟೆ ಕೇಳಿದ ಮೇಲೆ ಸುಮಾರು ಐದಾರು ಗಂಟೆ ನಿದ್ದೆಮಾಡಿ ಎದ್ದಂತೆ ಭಾಸವಾಗುತ್ತಿತ್ತು ನನಗೆ.

ಹಿಂದಿನ ಏಕಾದಶಿ ದಿವಸ ಅವರೆಕಾಳು ಒಂದಿಷ್ಟು ಉಪ್ಪಿಟ್ಟು, ಒಂದಿಷ್ಟು ಹೆಸರುಬೇಳೆ ಕೋಸಂಬರಿ ಮಾಡಿದ್ದರು. ಅವತ್ತು, ನಾನೂ ಉಪವಾಸಮಾಡುತ್ತೇನೆ ಎಂದು ಹೇಳಿದೆ. ನನಗೂ ಒಂದು ತಟ್ಟೆ ತಂಬ ಉಪ್ಪಿಟ್ಟು, ಕೋಸಂಬ್ರಿಕೊಟ್ಟರು. ಅದನ್ನು ತಿಂದ ಮೇಲೆ ನಾಲ್ಕೈದು ಬಾಳೆಹಣ್ಣನ್ನು ತಂದು ಕೈಗೆ ಹಾಕಿದರು. ಅದನ್ನೂ ತಿಂದ ಮೇಲೆ ಹಾಸಿಗೆ ಮೇಲೆ ಬಿದ್ದುಕೊಂಡೆ. ವಿಲ ವಿಲ ಅಂತ ಒದ್ದಾಡಿದೆ. ಬಹಳ ಹೊತ್ತು ಹಾಗೇ ಇದ್ದೆ. ಉಪವಾಸಮಾಡಿ ಅಭ್ಯಾಸ ಇಲ್ಲದಿದ್ದರಿಂದ ಬಹಳ ಹೊತ್ತು ಕಣ್ಣಿಗೆ ನಿದ್ದೆಹತ್ತಲಿಲ್ಲ. ಸ್ವಲ್ಪ ಹೊತ್ತಿನಲ್ಲಿಯೇ ದೇವಸ್ಥಾನದ ಘಂಟನಾದ ನಿಶಾಮೌನವನ್ನು ಸೀಳಿಕೊಂಡು, ನನ್ನ ಮನೆಯ ಕಿಟಕಿ ಕಂಬಿಗಳ ಸಂದಿನಲ್ಲಿ ತೂರಿ, ನನ್ನ ರಗ್ಗನ್ನು ಬೇಧಿಸಿಕೊಂಡು ಕಿವಿಯನ್ನು ಹೊಕ್ಕಿತು. ನನಗೆ ಇನ್ನೂ ನಿದ್ದೆಯೇ ಬಂದಿರಲಿಲ್ಲ. ಆಗಲೇ ಐದು ಘಂಟೆಯೆ? ಅಂತ ಬೆಚ್ಚಿ ಎದ್ದೆ. ಒಳಗಡೆ ಹೋಗಿ ಗಡಿಯಾರನೋಡಿದೆ. ಆಗ ಘಂಟೆ–ಒಂದು ಘಂಟೆ ನಲವತ್ತು ನಿಮಿಶ! ಭಟ್ಟನಿಗೆ ಈ ನಡುವೆ ಹುಚ್ಚು ಹಿಡಿಯುತ್ತಿರಬೇಕು. ದಿವಸವೂ ಇದೇ ಹೊತ್ತಿಗೆ ಎಂದು ಕಾಣುತ್ತೆ ಇವನ ಘಂಟಾನಾದ–ಇದೇನು ಅತಿ ಭಕ್ತಿಯೋ, ಅಜ್ಞಾನವೊ ಯಾವುದೂ ನನಗೆ ಗೊತ್ತಾಗಲಿಲ್ಲ. ದೇವಸ್ಥಾನಕ್ಕೆ ಹೋಗಿ ಭಟ್ಟನನ್ನು ಆಗ ಮಾತಾಡಿಸಲು ಧೈರ್ಯವಿಲ್ಲದೆ ಹಾಸಿಗೆ ಮೇಲೆ ಮಲಗಿದೆ. ನಿದ್ದೆಬಂತು.

ಭಟ್ಟನ ಮನೆ ನಮ್ಮ ಬೀದಿಯಲ್ಲಿಯೇ. ಬೆಳಗ್ಗೆ ಎದ್ದು ಅವನ ಮನೆಕಡೆ ನಡೆದೆ. ಭಟ್ಟ ಬೀದಿ ಬಾಗಲಲ್ಲೇ ನಿಂತಿದ್ದ. ನನ್ನನ್ನು ನೋಡಿ ಜಗುಲಿ ಮೇಲೆ

ಚಾಪೆ ಹಾಕಿದ. ಅವನ ಮುಖದಲ್ಲಿ ಏನೇನೂ ಆತರ ಇರಲಿಲ್ಲ. ದುಗುಡವಿರಲಿಲ್ಲ. ಅತಿ ವಿನಿಯ ನಮ್ಮ ಭಟ್ಟನ ಲಕ್ಷಣ! "ಏನು ಭಟ್ಟರೆ–ಧನುರ್ಮಾಸದ ಪೂಜೆ ಬಹಳ ಜೋರಾಗಿದೆಯಲ್ಲ, ಎರಡು ಗಂಟೆಗೆ ಪೂಜೆ ಪ್ರಾರಂಭ, ಭಕ್ತಿ ಶ್ರದ್ಧೆ ಅಂದರೆ ನಿಮ್ಮದು" ಎಂದು ಭಟ್ಟನನ್ನು ಹೊಗಳಿದೆ.

ಭಟ್ಟ ಬಲು ಬುದ್ಧಿವಂತ. ನನ್ನ ಮಾತು ಕೇಳಿ ಅವಾಕ್ಕಾದ. ಬಹಳ ಸೌಜನ್ಯ ದಿಂದ "ಒಳಕ್ಕೆ ಬನ್ನಿ" ಅಂದ. ಚಾಪೆ ಮೇಲೆ ಕೂರಿಸಿ ಕಾಯಿ, ಬೆಲ್ಲ, ತುಪ್ಪ ಹಾಕಿ ಕಲಸಿದ ಹುಗ್ಗಿಯನ್ನು ಒಂದು ಎಲೆಯಲ್ಲಿಟ್ಟುಕೊಂಡು ಬಂದು ನನ್ನ ಮುಂದಿಟ್ಟ. ಭಟ್ಟನಿಗೆ ನನ್ನ ವಿಚಾರದಲ್ಲಿ ಬಹಳ ವಿಶ್ವಾಸ. ಭಟ್ಟನ ವಿಚಾರದಲ್ಲಿ ನಾನೂ ಹಾಗೆಯೇ ಇದ್ದೆ!

ಭಟ್ಟನ ಮನಸ್ಸಿಗೆ ಏನು ತೋಚಿತೋ–ಅವನು ಸ್ವಯಂಪ್ರೇರಿತನಾಗಿ ಹೇಳಿದ —"ನಾನು ೨ ಗಂಟೆಗೇನೇ ಧನುರ್ಮಾಸದ ಪೂಜೆ ಮಾಡುತ್ತಿರುವುದು ನಿಜ. ಅಜ್ಞಾನದಿಂದೇ ಮಾಡಿಲ್ಲ. ಸ್ವಲ್ಪ ನಸು ಬೆಳಗಾದರೂ ೩೦, ೪೦ ಹುಡುಗರು ಜಮಾಯಿಸಿಬಿಡುತ್ತಾರೆ. ಒಬ್ಬೊಬ್ಬ ಹುಡುಗನಿಗೆ ಎಷ್ಟೇ ಸ್ವಲ್ಪಕೊಟ್ಟರೂ ನೈವೇದ್ಯ ಮುಗಿದು ಹೋಗುತ್ತೆ. ಅವತ್ತು ನನ್ನ ಹೊಟ್ಟೆ ಮೇಲೆ ಒದ್ದೆಬಟ್ಟೆ. ರಾತ್ರಿ ಎರಡು ಗಂಟೇಲಿ, ಕೊರೆಯುವ ಛಳೀಲಿ ಯಾರೂ ಬರೋಲ್ಲ. ದೇವರಿಗೆ ತೋರಿಸಿ ಮನೆಗೆ ತೆಗೆದುಕೊಂಡು ಹೋದರೆ ಅವತ್ತಿನ ಕಥೆ ಕಳೆಯುತ್ತೆ. ದೇವರಿಗೆ ಪೂಜೆಯು ಯಥಾ ವಿಧಿಯಾಗಿ ನಡೆದಹಾಗಾಗುತ್ತೆ, ಜನಗಳನ್ನೂ ಮೆಚ್ಚಿಸಿದ ಹಾಗಾಗುತ್ತೆ" ಎಂದು.

"ಬಲೆ ಭಟ್ಟ, ನೀನು ದುರದೃಷ್ಟಶಾಲಿ. ರಾಜಕೀಯಕ್ಕಿಳಿದಿದ್ದರೆ ಮುಂದಕ್ಕೆ ಬರುತ್ತಿದ್ದೆ" ಅಂತ ಹೇಳಿ ಹುಗ್ಗಿ ತಿಂದು ಮನೆಗೆ ಬಂದೆ!

—ಹಾ. ರಾ.

★

ಕಾಮನ ಹಬ್ಬಕ್ಕೆ



೨೮ನೇ ತಾ॥ ಸಾಯಂಕಾಲ — ಮರುದಿನ ಬೆಳಿಗ್ಗೆ

# ನೆನಹು

ಹಸಿಯ ಮೆಣಸಿನಕಾಯಿ, ಉಪ್ಪು, ಕಡಲೆ ಬೇಳೆಯ ಸವಿಯ
ಸಮಾಗಮುವೆನೆ ನಿನ್ನ ನೆನಹಪ್ಪುದು; ನಿನ್ನ ತನುಗಾತ್ರಮಂ,
ರೂಪಮಂ ನೆನೆ ನೆನೆದು ಕಣ್ಣೀರು ಆರದೆ ಇಹುದು, ಮೇಣ್
ಮನವೆಲ್ಲ ಶೂನ್ಯವಾಗಿಹುದು!
ಅಂದಿನಾ ದಿನದ ಸೊಗಸು, ವೈಖರಿ ಎಲ್ಲಿ ಹೋಯಿತು ಹೇ!
ನಳಪಾಕದಪರಾವತಾರವೇ? ನಿನ್ನ ತುಂಬಿದ ಎದೆಗೆ ಬಂದಿತೇನದು
ಬೇನೆ? ಪೆಸರ ಪೇಳ್ದೊಡನೆ ಪಿತೃಗಳ್ ಚಡಪಡಿಸುತಿರ್ದರ್
ಮೇಲ್ ಲೋಕದೊಳ್; ದೂರದಿಂದೈತರುವ ಧೂಮ ಶಕಟದ ದಾರಿ
ಹೋಕರಿಗೆ ನಿನ್ನ ಧ್ಯಾನತಾ ಅಮೃತಪ್ರಾಯವಾಗಿತ್ತಲ್ತೆ!
ಹೇ! ಬಡವನ ಬಂಧು! ನಿನ್ನ ಗತಿ ಈಗಳೇನಾಯ್ತು? ವಿ. ಸೀ. ಯ.
ಮೃಗಶಾಲೆ ಸಿಂಹಗಳ ತೆರದಿ ಸೊರಗಿಹುದಯ್ಯೋ ನಿನ್ನ
ಕರಿದೊಡಲು! ಇನ್ನುಂ ಅವನತಿ ಕಾಣ್ಬ ಮುನ್ನವೇ ಮೇಲಕೆದ್ದೇಳು.
ನಿನಗೆ ಸಂದಿರುವ ಸಲ್ಲದಪವಾದವನು ಪುಸಿಮಾಡು. 'ರೇಷನ್'
ಕಾಲವಿದೆಂದು 'ಉದರ ವೈರಾಗ್ಯವನ್ನು'ವನ್ನು ತಾಳಲಿ ಬೇಡ. ನಿನ್ನ
ಹಂಬಲಿಸಿ ಐತರುವ ಯಾತ್ರಿಕರಿಗೆಲ್ಲ ಬರಿ 'ಬೆರಣಿ' ಯೆನಿಸದೆ,
ನಿನ್ನ ಪೂರ್ವ ಗರ್ವದಿಂ, ಘಮಲಿಸಿಂ ಮೇಣ್ ಕೊಬ್ಬಿನಿಂ ಸಂತಸವ
ನೀಡು ಹೇ! ಮದ್ದೂರು ವಡೆಯೆ!!

—ನಾ. ಶೇ. ಲಕ್ಷ್ಮಣರಾವ್.

★



" ನೋಡು ತಮ್ಮಣ್ಣ–ನಾನು ಕೆಲಸಕ್ಕೆ ಸೇರಿದಾಗ ಜನ ಇಷ್ಟು ಕೆಟ್ಟಿರಲಿಲ್ಲಾ ! "

# ಸತ್ತವನ ಪ್ರಶ್ನೆ

---

ಶಿವಲಾಲರು ಬಿ.ಎ., ಬಿ. ಎಲ್. ಏನೂ ಅಲ್ಲ; ಆದರೂ, ಪ್ರತಿಭಾವಂತರು. ಉಜ್ವಲ ದೇಶಭಕ್ತರು; ತ್ಯಾಗ ಮೂರ್ತಿಗಳು. ಅವರ ತಂದೆ ಉದ್ದಾಮ ಪಂಡಿತರು, ಆದರೂ, ಅವರು ವಿದ್ಯಾವಿನಯ ಸಂಪನ್ನರು. ೧೯೨೧, ೨೮, ೩೦, ೩೯, ೪೨ ಇತ್ಯಾದಿ ರಾಷ್ಟ್ರ ಸಮರಗಳಲೆಲ್ಲ ಅವರು ಸಂತೋಷದಿಂದ ಧುಮುಕಿ ಕಾರಾಗೃಹಗಳನ್ನು ಪವಿತ್ರಗೊಳಿಸಿದ್ದರು. ಸುತ್ತ ಸಾವಿರ ಹಳ್ಳಿಗೆ ಅವರೇ ಸಮ್ರಾಟ್ ಎನಿಸಿ ರಾಜಕೀಯ ಸಾಮಾಜಿಕ ವಲಯಗಳಲ್ಲಿ ಅವರು ಮೆರೆದರು.

ಮೊನ್ನೆ, ಅವರು, ಹೇಗೋ ಏನೋ, ಅವರ ಊರಿನ ಗಾಂಧೀರೋಡಿನಲ್ಲಿ ಹೋಗುತ್ತಿದ್ದರು. ಅಲ್ಲಿಗೆ ಏಕೆ ಬಂದೆ, ಎಂಬುದು ಅವರಿಗೇ ಆಶ್ಚರ್ಯ. ಬೆಳಗ್ಗೆ ಎದ್ದ ಲಾಗಾಯ್ತು, ಅಲ್ಲಿಯವರೆಗೆ ಏನೇನು ಮಾಡಿದ್ದೆ, ಯಾವ ಕೆಲಸಕ್ಕಾಗಿ ಗಾಂಧೀ ರೋಡಿಗೆ ಬಂದೆ, ಎಂಬುದು ಅವರಿಗೆ ಏನೂ ತಿಳಿಯದು. "ನಿದ್ದೆಯಲ್ಲೇ ಎದ್ದು ಬಂದಿರಬೇಕು" ಎನಿಸಿತು, ಅವರಿಗೆ. "ಇರಲಾರದು, ಎಚ್ಚರವಾಗಿಯೇ ಇರುವಂತೆ ತೋರುತ್ತದಲ್ಲಾ" ಎಂದು ಅವರು ತಮಗೆ ತಾವೇ ಹೇಳಿಕೊಳ್ಳುತ್ತಿದ್ದರು. ಅವರ ಹೆಜ್ಜೆ ಕೂಡ, ಕೊಂಚ ಅಸ್ತವ್ಯಸ್ತವಾಗಿಯೇ ಇತ್ತೆನ್ನಬಹುದು.

ಆಗ, ಅದೇ ರಸ್ತೆಯಲ್ಲಿ ಎದುರಿಗೆ ಬರುತ್ತಿದ್ದ ಇಬ್ಬರು ಸ್ವಯಂಸೇವಕರು, ಅವರನ್ನು ಕಾಣುತ್ತಲೂ, ಸಲಾಮು ಮಾಡದೆ, ಕೈ ಮುಗಿಯದೆ, ಜೈಕಾರ ಮಾಡದೆ, ಅವರನ್ನೇ ದುರ ದುರನೋಡುತ್ತ, ಚೀರಿ ಓಡಿದರು. ಶಿವಲಾಲರಿಗೆ ಕೊಂಚ ಭಯವೇ ಆಯಿತು. ದೇಶ ಸೇವಕ ದೇಶೋದ್ಧಾರಕ ಎನಿಸಿಕೊಂಡಿದ್ದ ತಮ್ಮನ್ನ ಸ್ವಯಂ ಸೇವಕರೂ ಕಡೆಗಣಿಸಲು ಪ್ರಾರಂಭಿಸಿದರೆ? ಆಗ, ಅವರೆದುರು, ಶಾಲಾ ಉಪಾಧ್ಯಾಯರ ತಂಡವೊಂದು ಬಂತು. 'ಗಂಟೆ ಎಷ್ಟು?' ಎಂದು ಶಿವಲಾಲರು ಕೇಳಿದಾಗ, ಅವರೆಲ್ಲರೂ, 'ಅಯ್ಯೋ' ಎಂದು ಕೂಗುತ್ತ, ಹೇಸಿ ಹೀಯಾಳಿಸುತ್ತ ಮುಂದಕ್ಕೆ ನಡೆದರು. ಪರಮಪೂಜ್ಯರಾಗಿದ್ದ ತಾವು, ಯಾವ ಕಾರಣದಿಂದ, ಯಾರ ಶಾಪದಿಂದ ಹೀಗೆ ಪರಮ ತ್ಯಾಜ್ಯರಾದರೆಂಬುದು ಅವರಿಗೆ ಬಗೆ ಹರಿಯಲಿಲ್ಲ.

ಆಗ, ಅವರೆದುರು ಖಾದೀಕೇಂದ್ರದ ರಾಮಸಿಂಗ್ ಬಿರುಬಿರನೆ ಬರುತ್ತಿದ್ದರು. ನಮಸ್ತೆ ಎಂಬ ಅವರ ಮಾತನ್ನು ಕೇಳಿ, ನೀಡಿದ ಅವರ ಬಲಗೈಯನ್ನು ನೋಡಿ,

ಆತ ನಡುಗಿದ; ಅಂಗಡಿಯೊಂದರ ಗೋಡೆಗೆ ಒರಗಿ, ದೂರ ಸರಿದ. ಶಿವಲಾಲರು ಮುಂದಕ್ಕೆ ನಡೆದರು.

ತಲೆ ತಿರುಗಿದಂತಾಯಿತು. ಮೈಗೆ ಬೊಜ್ಜು ಹೆಚ್ಚಿದಂತಾಯಿತು. ಕಣ್ಣು ಮಂಜು ಕಟ್ಟಿತ್ತು. ಕಿವಿ ಮಂದವಾಯಿತು, ನಾಲಿಗೆ ಎರಡಾಗಿ ಸೀಳಿದ್ದಂತೆ ಭಾಸವಾಯಿತು. ದುರ್ವಾಸನೆ ಹಿಡಿಯುವ ಶಕ್ತಿ ಮೂಗಿಗಿಲ್ಲವಾಯಿತು. ಹಿಂದೆ ಆಡಿದ್ದನ್ನೆಲ್ಲ ಮರೆತಂತೆ ತೋರಿತು. ತಾವು ತಾವೇ ಅಲ್ಲವೋ ಏನೋ, ಎಂದು ಅನುಮಾನಿಸಿದರು.

ಮನೆಗೆ ಹಿಂತಿರುಗೋಣವೆಂದು ಅವರು ಒಂದು ಟ್ಯಾಕ್ಸಿಯನ್ನು ಕರೆದರು. ಡ್ರೈವರ್ ಅವರ ಕೂಗನ್ನು ಕೇಳಿ, ಇನ್ನೂ ವೇಗವಾಗಿ, ಓಡಿಸಿ, ಕಣ್ಮರೆಯಾದ. ಚಕ್ರ ಹಿಡಿದ ಅವನ ಕೈ ಸೊಟ್ಟ ಸೊಟ್ಟಾಗಿ ಅದನ್ನು ತಿರುಗಿಸಿತು. ಅವನ ಕಣ್ಣಲ್ಲಿ ಭಯ ತುಂಬಿತು.

ಶಿವಲಾಲರು ದಿಗ್ಭ್ರಾಂತರಾದರು. ಸಾರ್ವಜನಿಕ ಫೋನ್ ಒಂದಕ್ಕೆ ನುಗ್ಗಿ, ತಮ್ಮ ಮನೆಗೆ ಫೋನ್‌ಮಾಡಿದರು; ತಮ್ಮನನ್ನು ಕರೆದರು. ಮನೆಯಲ್ಲಿ ತಮ್ಮ ಇರಲಿಲ್ಲ. ಆಳೊಬ್ಬ ಫೋನನ್ನೆತ್ತಿ, "ಮನೆಯಲ್ಲಿ ಯಾರೂ ಇಲ್ಲ, ಸ್ವಾಮಿ! ನೀವು ಕೇಳಿಲ್ಲವೇನು? ಸುದ್ದೀನ? ಕೆಟ್ಟಸುದ್ದಿ. ನಮ್ಮ ಸಾಹೇಬರಿಗೆ ನಾಲ್ಕೈದು ವರ್ಷದಿಂದ ಒಂದು ರೀತಿ ಖಾಯಿಲೆ ಬಂದಿತ್ತು; ಅವರ ನಡೆವಳಿಕೇನೇ ಬದಲಾಯಿಸಿ ಹೋಗಿತ್ತು; ಇವತ್ತು ಬೆಳಗ್ಗೆ ಅವರು ಆ ಜನ್ಮ ತ್ಯಜಿಸಿ, ಬೇರೆ ಜನ್ಮ ತಾಳಿದರು.... ಊರಿನವರೆಲ್ಲ ಇವತ್ತು ಅವರ ಸಾವಿಗಾಗಿ ಪರಿತಪಿಸುತ್ತಾ ಇದಾರೆ" ಎಂದ.

ಶಿವಲಾಲರು,—ಅವರ ಬಾಯಿಂದ ಈ ಪ್ರಶ್ನೆ ಏಕೆ ಬಂತೋ ಏನೋ— "ಅವರನ್ನ ಹೂಳುತ್ತಾರೋ ಸುಡುತ್ತಾರೋ?" ಅಂತ ಆ ಆಳನ್ನ ಕೇಳಿದರು, ಫೋನ್‌ನಲ್ಲಿ. ಅದಕ್ಕೆ ಅವರಿಗೆ ಈ ಉತ್ತರ ಬಂತು, "ಎರಡೂವೇ!"

—ರೇವಣ್ಣ.

— o —



# ಕರ್ಮ ಯೋಗ

ಪಾತಿ ಕಟ್ಟಿ ನೀರನೆರೆದು
ಬೀಜ ಹೂತು, ಗೊಬ್ಬರ
ಹಾಕೆ ತೋಟದಬ್ಬರ
ಸುತ್ತ ಬೇಲಿ, ಕೂಲಿ ಆಳು—
ಏನು ಬಂತು?—ಇದರ ಫಲ?—ಬರಿ ನೆಲ, ಬರಿನೆಲ!

ಹಲ್ಲನುಜ್ಜಿ ಮುಖವ ತೊಳೆದು
ನ್ಯೈಯತಿಕ್ಕಿ ಮೂರು ಹೊತ್ತು
ಸ್ನಾನಮಾಡಿ, ಅಗಿದು ತಿಂದು,
ಗಾಳಿ ಕುಡಿದು, ಮೈಲಿ ನಡೆದು—
ಏನುಬಂತು? ಇದರ ಫಲ?—ಖಾಯಿಲೆ! ಖಾಯಿಲೆ!

ಹಗಲು ಇರುಳು ದುಡಿದುಗಳಿಸಿ
ಸಾಲದಕ್ಕೆ ಸಾಲ ಬಳಸಿ
ಮೂಗುದಾರ, ಗೂನು ಬೆನ್ನು
ಗಂಡ, ಪಾಪ, ಗಾಣದೆತ್ತು!
ಏನು ಬಂತು! ಇದರ ಫಲ?—ಬೈಗಳು! ಬೈಗಳು!

ಸತ್ಯವಂತ, ದಯಾಶೀಲ
ನಡೆ ನುಡಿ ತಪ್ಪೆ ಇಲ್ಲ;
ಪಾಪ ಭೀತಿ ನಯ ನೀತಿ
ದೈವಭಕ್ತ, ಕುಹಕವಿಲ್ಲ.
ಏನು ಬಂತು? ಇದರ ಫಲ?—ಬಡತನ! ಬಡತನ!



# ದಫೇದಾರ್ ದೇರಣ್ಣೋರು

" ಸಾವಂತ್ರೀ ... ಹಾಳು ತಾಪೇದಾರಿ ಸಾಕುಕಣೆ ... ರಾಜಿನಾಮೆಯೇ ಇದಕ್ಕೆ ರಾಜ ಮಾರ್ಗ" ಎಂದೆನ್ನುತ್ತಾ ಧೊಪ್ಪನೆ ದಪ್ಪ ಪೇಟ ಕೆಳಕ್ಕೆ ಇಳಿಸಿದರು. ನಿರುತ್ಸಾಹ—ಜಿಗುಪ್ಸೆ ಅವರ ಹುಬ್ಬನ್ನು ಆವರಿಸಿ ಮುದುಡಿಸಿತ್ತು. ಹಲ್ಲು ಮೇಲುದುಟಿಯ ತುಂಬ ಮೀಸೆಯನ್ನು ನವಿರಾಗಿ ಕಚ್ಚುತ್ತಿತ್ತು. ಹೇಗು ಮೇಲಿನ ಓವರ್ ಕೋಟು ಸಾವಂತ್ರಿ ಇಳಿಸಿದಳು. ಮಂಚದ ಮೇಲೆ ಮಂಡಿಸಿ ಭಾರವಾದ ಬೂಡ್ಸನ್ನು ಕಳಚಿ ಬದಿಗೆ ಸರಿಸಿದರು. ಮೀನುಖಂಡವನ್ನಾವರಿಸಿದ ಪಟ್ಟಾವಳಿ ಪದರು ಪದರಾಗಿ ಬಿಚ್ಚಿ ಸುರುಳಿ ಸುತ್ತಿ ಕಾಲುಚಾಚಿ ಪಾದ ಹಿಗ್ಗಿಸಿ " ಉಸ್ಸಪ್ಪ" ಹೇಳಿದರು.

ಯಜಮಾನರ ಈ ಅವಸ್ಥೆ ಸಾವಂತ್ರಿಗೇನು ಹೊಸದಲ್ಲ. ಹಾಕುತ್ತಿದ್ದ ಕಸೂತಿಯಿಂದ ದೃಷ್ಟಿ ಕಿತ್ತದೆ, " ಆದದ್ದಾದರೂ ಏನೀಗ?" ಎಂದಳು ವಯ್ಯಾರದ—ಧ್ವನಿಯಲ್ಲಿ.

" ಗಂಡಸಿನ ಚಿಂತೆ ನೀನೇನು ಬಲ್ಲೆ, ಸಾವಿ, ದುಡಿದು ಹಾಕುವವನಿಗೆ ಗೊತ್ತು ಅದರ ದುಗುಡ" ಎಂದು ಬೆಲ್ಟು ಬಿಚ್ಚಿ ಗೂಟಕ್ಕೆ ತಗುಲಿಹಾಕಿದರು.

ಸೌ|| ಸಾವಂತ್ರಿ ಕುಳಿತಲ್ಲಿಂದ ಎದ್ದು ಅಡಿಗೆ ಮನೆಗೆ ಹೋಗಿ ಬಿಸಿ ಬಿಸಿಯಾಗಿ ಇಳಿಸಿದ ಕಾಫಿ ಲೋಟ, ತಟ್ಟೆಯಲ್ಲಿ ಎಂಟು ಪಕೋಡ, ಇಟ್ಟುಕೊಂಡು ದ|| ದೇರಣ್ಣನವರ ಮುಂದೆ ನಿಂತಳು. ಸಾಕ್ಷಾತ್ ಸರಸ್ವತಿ ಪ್ರತ್ಯಕ್ಷವಾಗಿದ್ದರೂ ಅಷ್ಟು ಸಂತೋಷವಾಗುತ್ತಿರಲಿಲ್ಲ—ಸಾವಂತ್ರಿ ಹಾಗೆ ಬಂದದ್ದು ದಫೇದಾರರಿಗೆ ಕಣ್ಣಿಗೆ ಹಬ್ಬವಾಯಿತು. ಮೊದಲೇ ಚಲುವೆ ಇನ್ನು ಪಕೋಡದ ತಟ್ಟೆ ಹಿಡಿದು ಬಂದರೆ ಕೇಳಬೇಕೆ? ಮರುಕ್ಷಣವೇ ಈ ಸಾವಂತ್ರಿ ಈ ಕಾಫಿ ಈ ಪಕೋಡವನ್ನಗಲಿ ಇರಬೇಕಾದ ಪ್ರಸಂಗ ಹತ್ತಿರವೇ ಬಂದದ್ದು ಮತ್ತವರ ಹಣೆಗೆ ನೆರಿಗೆ ಮೂಡಿಸಿತ್ತು—ಕಣ್ಣು ಚಿಕ್ಕದಾಯಿತು, ಮುಖ ಚಿಂತಾಕ್ರಾಂತವಾಯಿತು.

" ಯಾವುದು ಅಂತಹ ಚಿಂತೆಗೆ ಕಾರಣ? ಎಂದು ಸಾವಂತ್ರಿ ಬಳುಕಿ ಎಳಿಬೆಂಡೆಯಂಥಾ ಕೈಯಿಂದ ಒಂದೇ ಪಕೋಡ ದಫೇದಾರರ ಬಾಯಿಗೆ ಕೊಟ್ಟಳು. " ಇಸ್ನಿಲ್ಲ ಈ ಪಕೋಡ ಪ್ರಿಯೆ" ಎಂದು ಕಚಪಚನೆ ಒಂದೇ ಸಲ ಅಗಿದು ನುಂಗಿ ಆ ಖಾರ್ಸ್ನೆಯ ವಾಸನೆ ಬಾಯಿಂದ ಆರುವ ಮೊದಲೇ ಕಾಫಿ ಹೀರಿ ಮತ್ತೊಂದು ಪಕೋಡಕ್ಕೆ ಬಾಯಿ ತೆಗೆದರು. " ವಿಷಯ ವಿವರಿಸಿವರೇ....ಮತ್ತೆ ಸ... ಮಾಡುವುದು" ಎಂದು

ತಟ್ಟಿ ಬೆನ್ನ ಹಿಂದೆ ಬಚ್ಚಿಟ್ಟಾಗ ದಫೇದಾರರಿಗೆ ಅಮೃತ ಕಲಶ ಬಚ್ಚಿಟ್ಟಾಗ ದೇವತೆಯರಿಗಾದ ಪಾಡಿನಂತಾಯಿತು.

"ಹೊನ್ನಾವರ—ಸಾವಂತ್ರೀ....ಅಂಬಸಂದ್ರ....ಅಣ್ಣಿಗೇರಿ...."

"ಇದೇನೊಂದ್ರೆ ಸರಿಯಾಗಿ ಹೇಳಬಾರದೇ...." ಎಂದು ಸಾವಂತ್ರಿ ಬದಿಗೇ ಬಂದು ಕುಳಿತಳು. ದಫೇದಾರರಿಗೆ ದುಃಖ ಉಕ್ಕಿಬಂತು. ಅವರು ಸಾವಂತ್ರಿಯನ್ನು ಬಿಟ್ಟಿರಲಾರರು—ಹೋಗಲಾರರು. ತುಂಬು ಕಣ್ಣಿಂದ ಹೇಳಿದರು "ವರ್ಗ—ವರ್ಗ ಸಾವಂತ್ರಿ....ವಣಜಾಗ ಅಣ್ಣಿಗೆರಿ....ಅಲ್ಲಿಗೆ ವರ್ಗ"

"ವಣ ಜಾಗ!!...."

"ಹೌದು....Drv Area-Special ಡ್ಯೂಟಿ....ಕಳ್ಳು ಇಳಿಸುವ ಕಳ್ಳರ ಗುಂಪು ಗುಂಪನ್ನೇ ಹಿಡಿಯಲು ನನ್ನ ಹಾಕಿದ್ದಾರೆ....ನಾಳೆಯೇ ಹೊರಡಬೇಕು." ಎಂದು ತಲೆ ತಗ್ಗಿಸಿಕೊಂಡು ಬಂದ ದುಃಖವನ್ನು ಕಡಿಮೆ ಮಾಡಿ ಕೊಳ್ಳಲು ಒಂದೊಂದಾಗಿ ಪಕೋಡ ತಿನ್ನತೊಡಗಿದರು. ಬಿಸಿ ಬಿಸಿಯ ಕಾಫಿ ಒಂದು ಪಾವು ಕುಡಿದರು. ಹನಿ ಹನಿಯಾಗಿ ಮೀಸೆಗೆ ಅಂಟಿದ ಕಾಫಿಯನ್ನು ಮುಂಗೈಯಿಂದ ಒರಸಿ ಅಂಗೈಯಿಂದ ತೀಡಿದರು.

"ಏನು ಅಡಿಗೆ ಮಾಡಿದ್ದೀ....ಸಾವಂತ್ರಿ"

"ಹೂಂ—ಏಳು ಊಟನಾದರೂ ಮಾಡುವ....ವಿಪರೀತ ಹಸಿವು...."

"ಅಣ್ಣಿಗೆರಿಯಲ್ಲಿ ಈ ಬಜ್ಜಿ ಈ ಮುದ್ದೆ ಯಾರು ಬಡಿಸಬೇಕು. ತಾಬೇದಾರಿ ತಾಪತ್ರಯ....ರಾಜಿನಾಮೆಯೇ ಇದಕ್ಕೆ ರಾಜಮಾರ್ಗ...." ಎಂದು ಮತ್ತೊಮ್ಮೆ ಹೇಳಿದರು. ಸಾವಂತ್ರಿಗೆ ಈ ಆತುರ ಸಹಿಸದು. ಏನೊಂದು ಚಿಕ್ಕ ಕಷ್ಟ ತಲೆ ದೋರಿದರೂ ರಾಜಿನಾಮೆಗೇ ರುಜು ಹಾತೊರೆಯುವುದು ದಫೇದಾರರ ಸ್ವಭಾವ. "ಅದಕ್ಕೆ ನಾನೆನ್ನುವುದು ಗಂಡಸಿಗೆ ಗುಂಡಿಗೆ ಇರಬೇಕು, ಹೆಂಗಸಿಗೆ ಶೃಂಗಾರವಿರ ಬೇಕೂಂತ....ಸುಮ್ಮನೆ ಹೋಗಿ ಅಣ್ಣಿಗೇರಿಯಲ್ಲಿ ಚಾರ್ಜು ತೊಗೊಳ್ಳಿ....ಅಲ್ಲಿರುವವರು ಮನುಷ್ಯರಲ್ಲವೆ? ನಿಮಗೂ ಒಂದು ಮನೆ ಸಿಕ್ಕೆ ಸಿಗುತ್ತೆ—ನಾನು ಬಂದೇ ಬರುತ್ತೇನೆ....ಹೀಗೆ ನೀವು ಹೇನಿಗೆ ಹೆದರಿ ಹಜಾಮನನ್ನು ಕರೆಸುವ ಕೆಲಸ ಮಾಡಬೇಡಿ...." ಎಂದು ಗುಡುಗಿದಳು. ದ|| ದೇವಣ್ಣನವರು ಗಬಗಬನೆ ಊಟ ಮುಗಿಸಿ ಎದ್ದರು. ಒಂದು ಮಾತು ಆಡಲಿಲ್ಲ. ಸಾವಂತ್ರಿ ಮಾತ್ರ ಯಜಮಾನರ ಪ್ರಯಾಣಕ್ಕೆ ಬೇಕಾದ ಸಾಮಾನು ಸರಿಂಜಾಮು ಕಟ್ಟುತ್ತಿದ್ದಳು.

ರೈಲ್ವೆ ಸ್ಟೇಷನ್ನಿಗೆ ಸಾವಂತ್ರಿಯೂ ಬಂದಿದ್ದಳು. ದಫೇದಾರ್ರು ಕುಚ್ಚು ಹೂವು ಕೊಂಡು ಸಾವಂತ್ರಿಗೆ ಮುಡಿಯಲು ಕೊಟ್ಟರು. ಹೂವು ಮುಡಿದು ನಿಂತ ಸಾವಂತ್ರಿ

ಸಾಕ್ಷಾತ್ ರತಿಯಂತೆ ಕಂಡಳು. ಬಡನಡು ಉಬ್ಬುಎದೆ ಅಗಲಗಣ್ಣಾ ನೀಳಕೇಶರಾಶಿ ಧರ್ಮಾವರದ ಸೀರೆ. ಧರಿಸಿನಿಂತ ಸಾವಂತ್ರಿಯನ್ನು ನೋಡುತ್ತಿದ್ದ ದಫೆದಾರ್ರಿಗೆ ರೈಲು ಸೀಟಿ ಊದಿದ್ದು ಕೇಳಿಸಲಿಲ್ಲ. ಬೈ ಬೈ ಹೇಳುತ್ತಾ ಓಡೋಡಿ ರೈಲು ಹತ್ತಿದಾಗ ಸಾವಂತ್ರಿಯ ಕಣ್ಣ ಕುಡಿಯಲ್ಲಿ ನೀರೂರಿತ್ತು. ದಫೇದಾರರ ಕುತ್ತಿಗೆ ನರ ಉಬ್ಬಿ ಮೂಗಲ್ಲಿ ಸೊರ ಸೊರ ಎಂದು ಎಳೆಯುತ್ತಾ ಕಣ್ಣೊರಸಿಕೊಂಡರು. ಈ ಪ್ರೀತಿಯ ದಂಪತಿಗಳ ಆಗಲುವಿಕೆಯ ದೃಶ್ಯ ಹೃದಯಭೇದಕವಾಗಿತ್ತು.

* * *

"ಒಸಾ ದಫೆದಾರ್ರು ಬಂದ್‌ರೋ....." ಎಂದ ಪೀಕ್ಯಾ. ಪೀಕ್ಯಾ ಆ ಲಂಬಾಣಿ ತಾಂಡದಲ್ಲಿ ಹೇಳಿದ ಮಾತು ನಡೀತಿತ್ತು. ದಫೇದಾರ್ರು ಚಾರ್ಜು ವಹಿಸಿದ ಮೂರು ದಿನದ ಮೇಲೆ ಮಾಮೂಲಿನಂತೆ ತಮ್ಮ ಆಡಳಿತಕ್ಕೆ ಸಿಕ್ಕ ಪ್ರದೇಶವನ್ನು ನೋಡಿ ಬರಲು ಹೊರಟರು. "ಶರಣ್ರಪ್ಪೊ" ಎಂದ ಪೀಕ್ಯಾ. ದ|| ದೇರಣ್ಣನವರು ಸಂಶಯಾತ್ಮಕ ಪೋಲೀಸು ದೃಷ್ಟಿ ಬೀರಿದರು. ಪೀಕ್ಯಾ ಬೆಪ್ಪಾದ. ಅವನೇನು ಸಾಮಾನ್ಯನಲ್ಲ. ಅನೇಕ ಮಂದಿ ದಫೇದಾರರನ್ನು ಬಲ್ಲವ; ಆದರೆ ದೇರಣ್ಣನವರ ಸ್ವಭಾವ ಹೇಗೊ?

ಬಹು ಬಿಸಿಲು—ನೆತ್ತಿ ಸಿಡಿದು ಹೋಗುತ್ತಿತ್ತು. ಹುಣಸೇ ಮರದ ಕೆಳಗೆ ಕಲ್ಲು ಮೇಲೆ ಕುಳಿತು ಪೇಟ ಇಳಿಸಿ ಸಣ್ಣನೆಯ ಧೂಳು ಸಹಿತ ಬೀಳುತ್ತಿದ್ದ ಗಾಳಿಗೆ ತಲೆಯೊಡ್ಡಿದರು. ತಲೆಮೇಲೆ ತುಂತುರು ತುಂತುರಾಗಿ ಪಸರಿಸಿದ ಬೆವರು ಹನಿಯಲ್ಲಿ ಗಾಳಿಯೊಡನೆ ತೂರಿ ಬಂದ ಧೂಳು ಸೇರಿ ಕಲಸಿಕೊಂಡು ದಫೇದಾರರಿಗೆ ಆನಂದವನ್ನುಂಟುಮಾಡಿತು. ಪೀಕ್ಯಾ ಎರಡು ಎಳೆನೀರು ತಂದ. ಒಡೆದು ಅವರ ಕೈಗೆ ಕೊಟ್ಟ. ಮರುಮಾತಾಡದೆ ಎರಡನ್ನೂ ಗುಟು ಗುಟು ಕುಡಿದರು. ಕಾಯಿ ಬಿಡಿಸಿ ಕೊಬ್ಬರಿ ತಿನ್ನಲು ಬಿಡಿಸಿಕೊಟ್ಟ ಪೀಕ್ಯಾ.

"ಬೆಲ್ಲವಿಲ್ಲದೆ ಕೊಬ್ಬರಿ—ತಿನ್ನುವುದು ಏನು ಚೆನ್ನ!!...."

ಎಂದಾಗ ಪೀಕ್ಯಾ ದ|| ದೇರಣ್ಣೋರ ಈ ಒಂದು ಮಾತಿನಿಂದ ಅವರ ಇಡೀ ಮನೋ ಧರ್ಮ ಅಳತೆ ಮಾಡಿದ.

"ಮಂಚೀನಹಳ್ಳಿ ಬೆಲ್ಲವೇ ...ಶಿಕಾರಿಪುರದ ಬೆಲ್ಲವೇ....ಮರಗಬ್ಬಿನ ಬೆಲ್ಲ ಸುಖವಿಲ್ಲ. ಜೋನಿಬೆಲ್ಲವೇ ಯಾವ ಬೆಲ್ಲಾ ಹೇಳ್ರಲಾ" ಎಂದು ಪೀಕ್ಯಾ ಒಂದೇ ಉಸಿರಿಗೆ ಹೇಳಿದ.

"ಯಾವ ಬೆಲ್ಲವಾದರೂ ಎಲ್ಲಾ ಸಿಹಿ ತಾನೆ!...." ಎಂದು ಯಾವುದಾದರೂ ಸರಿ ಎಂಬ ಅರ್ಥ ಕಾಣಿಸಿದರು. ತಕ್ಷಣವೇ ಪೀಕ್ಯಾ ಒಂದು ಸಂಚೇರಿನಷ್ಟು

ಜಿರ್ಲೋ ಶಿಕಾರಿಪುರದ ಬೆಲ್ಲ ತರಿಸಿ ಮುಂದಿಟ್ಟ. ಆ ಎಳೆ ಕೊಬರಿ ಜೇನುತುಪ್ಪ ದಂತ ಬೆಲ್ಲ ಹದವಾಗಿ ಅಗಿದಾಗ ಬಹು ಹಿತವಾಗಿತ್ತು. ಬದಿಯಲ್ಲಿನ ಮುತ್ತುಗದ ಎಲೆಯಿಂದ ಪೀಕ್ಯಾ ಗಾಳಿ ಹಾಕುತ್ತಿದ್ದ.

"ಇವೇನು ಉಪಚಾರ–ಯಾದು ನೀನು...."ಎಂದು ಕೇಗಿದರು ದಫೇದಾದ್ರು.

"ನಾನು ಪೀಕ್ಯಾನ್ರಿ...."

"ಪೀಕ್ಯಾ!!....ಅಂದರೆ?"

"....ದ|| ಲಿಂಗಣ್ಣೋರು ನಿಮಗೇನೂ ಹೇಳಿಲ್ಲವರಾ....ಚಾರ್ಜು ಕೊಡಬೇಕಾ ದರೆ—ನನ್ನ ಚಾರ್ಜೂ ಕೊಡಿಲಿಲ್ವ?...."

"ನಿನ್ನ ಚಾರ್ಜು....?....ಅಂದರೆ...."

"ನೀವು ಭಾಳ ಸಾಚಾ ಅದ್ರಿ ಕಾಣಸ್ತೀರಿ....ದಫೇದಾರ್ರೇ....ಹಿಂದಿನ ದಫೇ ದಾರ್ರಿಗೆ ಅವರ ಹಿಂದಿನ ದಫೇದಾರ್ರು ನನ್ನ ಚಾರ್ಜು ಕೊಟ್ಟಿದ್ದರು....ಲಿಂಗಣ್ಣೋರೂ ಹಂಗೆ ಮಾಡ್ತಾರೇಂತ ಇದ್ದೆ....ನನಗೇನು ಗೊತ್ತು...."

"....ಅದೇನು ಬಿಡಿಸಿ ಹೇಳಬಾರದೆ?...."

"ಹೇಳೋದೇನೈತಿ ಗುರುವೆ ತಿಳಿದವರಿಗೆ—ಲಿಂಗಣ್ಣೋರು ಸಬ್‌ಇನಿಸ್ಪೆಕ್ಟ ರಾಗಿ ಹೋದರು ಗೊತ್ತೆ...."

"ಗೊತ್ತು...."

"ಅದಕ್ಕೇ ಈ ಪೀಕ್ಯಾನೆ ಕಾರಣ ದಫೆದಾರ್ರೆ....ತಮ್ಮನ್ನೂ ಸಬ್‌ಇನಿಸ್ಪೆಕ್ಟ ರಾಗೇ ಹಂಗೆ ಮಾಡಬೇಕಾದ್ದು ಈ ಬಡವನ ಕೆಲಸ" ಎಂದು ಬಂಗಾರದ ತೋಡೆ ಇದ್ದ ಬಲಗೈಯಿಂದ ತನ್ನ ಮೀಸೆ ತಿರುಚಿ ಹಿಡಿಸಿದ. ಹುಬ್ಬು ಹಾರಿಸಿದ ದಫೇ ದಾರ್ರು ಬಾಯಿಬಿಟ್ಟ ಬೆಪ್ಪನಂತೆ ಕುಳಿತರು. ಲಿಂಗಣ್ಣಯ್ಯ ದಫೇದಾರಿಕೆಯಿಂದ ಸಬ್‌ಇನ್ಸ್ಪೆಕ್ಟರಗಿರಿಗೆ ಏರಿದ್ದು ಈ ಪೀಕ್ಯಾನಿಂದೆ? ಕಾಲೆಳೆದುಕೊಂಡು ಪೋಲೀಸ್ ಸ್ಟೇಷನ್ ಸೇರಿದರು. ಅದೇ ಚಿಂತೆ. ಅದು ಹೇಗೆ? ಇವನ್ಯಾರು?

"ಹೇಳೋದು ಕೇಳು ಧಣೇರೇ...." ಎಂದ ಪೀಕ್ಯಾ. ಆಗಲೇ ಗೊತ್ತಾದದ್ದು ತಮ್ಮ ಹಿಂದೆಯೇ ಅವನೂ ಬಂದಿದ್ದನೆಂದು. ಇಂತಹ ಚಿಂತೆಯ ಕಾಲದಲ್ಲಿ ದಫೇ ದಾರರಿಗೆ ಪಕೋಡವಿಲ್ಲದ್ದು ನೆಶ್ಯ ಆಹಾರಿಗೆ ನೆಶ್ಯ ಸಿಕ್ಕದೆ ಒದ್ದಾಡುವ ಸ್ಥಿತಿ ಆಗಿತ್ತು. ಕುರ್ಚಿಯಲ್ಲಿ ಕುಕ್ಕರಿಸಿದರು. ಪೀಕ್ಯಾ ಪಕ್ಕದಲ್ಲೇ ನಿಂತು ನವಿರಾಗಿ ಕೆಮ್ಮಿದ. "ವಿಷಯ ಹೇಳು ಪೀಕ್ಯಾ...." ಎಂದರು.

"ದೇವರದಯ! ಒಂದೊಂದು ಕಾಲಕ್ಕೆ ಒಬ್ಬೊಬ್ಬರಿಗೆ ದೇವರು ಮಾಗೀ ಕಾಣಸ್ತಾನೆ. ಗುರುವೆ—ಲಡಾಯಿ ಬಂತು—ಕಂತ್ರಾಟುದಾರ್ರು ಬಿಲ್ಲ್ಯಾಕ್ ಮಾರ್ಕೆಟು ಮಂದಿ ಲಕ್ಸ ಲಕ್ಸ ಮಾಡಿದರು....ಫಿರಂಗ್ಯೋರು ಓದ್ರು ಸುರಾಜ್ಯ ಬಂತು ...ನಮಗೆ ಸುರಾಜ್ಯ ಬಂತು...."

"ಇಲ್ನೋಡು ಪೀಕ್ಯಾ—ಸುರಾಜ್ಯ ಸರ್ಕಾರದ ವಿಷಯ ನನ್ನ ಹತ್ತಿರ ಬೇಡ ಸರ್ಕಾರಿ ಕೆಲಸದವ ನಾನು ಹುಶಾರಾಗಿರು...."

"ಅರರರೆ....ಅದಕ್ಕೆ ದೇರಣ್ಣೋರ ನಾನು ಹೇಳಿದ್ದು....ನೀವಿನ್ನೂ ಆಸು ಗೂಸೂಂತ...."

"ಹೌದು ಪೀಕ್ಯಾ—ಸಾವಿಂತ್ರೀನು ಹಂಗೇ ಅಂತಿದ್ದಳು...."

"ಸಾವಂತ್ರಿ!....ಅವ್ವಾ ಅವರ, ಗುರುವೆ"

"ಹೌದು ಪೀಕ್ಯಾ...."

"ಒಳ್ಳೆ ಮನೆ ಕೊಡಿಸ್ತೀನಿ ...ಕೈತುಂಬ ಹಣ ತಾನಾಗೇ ಬರ್ತೈತೆ... ನಿಮ್ಮ ಪುಣ್ಯ ಈ ಊರಿಗೆ ವರ್ಗವಾಗೈತೆ . ಆಗಲೆ ಹೇಳ್ಳಿಲ್ವಾ ನಿಮ್ಮನ್ನು ಸಬ್ಇನಿಸ್ಪೆಕ್ಟ್ರು ಮಾಡೋದು ನನ್ನ ಭಾರಾಂತ"

"ಅದ್ಹೇಗೆ ಪೀಕ್ಯಾ . ಹೇಳಬಾರದೆ"

"ಹೇಳೋಕೋದ್ರೆ ಬಾಯಿ ಬಡೀತೀರಿ ...ಸ್ವರಾಜ್ಯ ಬಂತು....ಆಳೀ ಕಾಲ ದಲ್ಲಿ ಕಟ್ಟಿಗೆ ಆಯ್ದು—ಸುಣ್ಣಕಲ್ ಸುಟ್ಟು—ಕಾಡು ಕುಳ್ಳು ಆಯ್ದು ಬಡವರೋಳಗೆ ಬಡವರು ಕಳ್ಳರೂಂತ ಸಂಸಾರ ಮಾಡಿದ್ದು ಈ ಲಂಬಾಣಿ ತಾಂಡ... ಗಾಂಧಿಯೋರು ಕುಡಿಯೋದು ಬೇಡಾಂದ್ರು ನಮ್ಮೋರು ಕಳ್ಳಂಗಡಿ ಎತ್ತಿ, ವಣಜಾಗ ಮಾಡಿದ್ರು— ನಾವು ಬದುಕಿದ್ವಿ...."

"ಹೌದು ಪೀಕ್ಯಾ—ಮೊದಲಿಗೆ ನೀವು ಬಲೇ ಕುಡುಕುಬಡ್ಡೀಮಕ್ಕಳಾಗಿದ್ರಿ— ಈಗ ಆ ದುಡ್ಡು ಉಳಿಸಿ ಯೋಗ್ಯವಾಗಿರ್ಲಿಂತ ವಣ ಜಾಗ ಮಾಡಿದ್ದು ..."

"ಹ ಹ ಹ ಹ....ಇನ್ನೊಂದ್ಸಲ ಏಳ್ತೀನಿ ನೀವು ಆಸು ಕೂಸಂತ—ಕೇಳಿ— ಕಾಡ ತಂಗಡಿ—ಹುಣ್ಸೇಬೇರು—ಮೂರು ಮಡಿಕೆ—ಸಗಣಿ ಮುದ್ದೆ—ಶಿಕಾರಿಪುರದ ಬೆಲ್ಲ ಬಲು ಸೊಗಸು ಕಾಕಂಬಿ ಇಳಿಸೋಕೆ ..."

"ಅಂದರೆ....ಅರ್ಥವಾಗಲಿಲ್ಲ"

"ಆಗೋಕೂ ಇಲ್ಲ ...ನಮ್ಮ ಪುಣ್ಯಾದಿಂದ ಗುರುವೆ....ಜಾಗ ವಣವಾದರೂ ಜನ ಹಸಿ ಇರಬೇಕೂಂತ ಖಯಾಲಿ—ಮಡಿಕೆ ಕೆಳಗೆ ಉರಿ ಹಾಕಿ ಮೂರು ವಾರ ಕಾಯಬೇಕು ಅಷ್ಟೆ—ಪರಮಾಯಿಷಿ ಪಾನಕ ಗಡಿಗೆ ತುಂಬು ತುಂಬಿ ಬರ್‍ತೈತೆ... ಏನು ಕಡಿಮೆ ಅಂದರೂ ಮುನ್ನೂರು ರೂಪಾಯಿ. ಇಡೀ ಈ ಲಂಬಾಣಿ ತಾಂಡಾ ದಲ್ಲಿ ಇಂಥ ನೂರು ಪಾನಕ ತಯಾರಿ ಕಂಪನಿ ಐತೆ"

"ಕಳ್ಳ ಸಾರಾಯಿ ಮಾಡೋಕು ಕಂಪನಿ... ಎಲ್ಲಾರ ಕೈಲಿ ಗೆದ್ದಹಾಗೆ ದೇರ ಣ್ಣೋರ ಕೈಲಿ ನಡೆಯೋಲ್ಲ ಪೀಕ್ಯಾ! .. ಗುಂಡಿಟ್ಟು ಸುಟ್ಟುಬಿಟ್ಟೇನು ಇಡೀ ತಾಂಡಾ ಕೈಗೆ ಕಡಗ, ಸೆರಮನೆ ವಾಸ... ಹುಶಾರ್ ಯಾರಹತ್ರ ನೀನು ಹರಟೋದು... ದಸ್ತ ಗಿರಿ ...ಕಾನೂನು, ಅದಕ್ಕೆ ಇಲ್ಲಿಗೆ ನನ್ನ ವರ್ಗಾಯಿಸಿದ್ದು....ಕಳ್ಳನೇ ಬಂದು ಬೇಡಿ ತೊಡ್ಸಿ ಅಂತ ಹೇಳಿದಹಾಗೆ ನೀನು ಹೇಳ್ತಿರೋ ವಿಷಯ ಪೀಕ್ಯಾ ...ಗೊತ್ತಾ ..." ಎಂದು ಗುಡುಗಿದರು. ಆದರೂ ಪೀಕ್ಯಾ ಶಾಂತವಾಗೇ ಇದ್ದ. ಅವನೇ ಹೇಳಿದ.

"ಮೊದಲ ದಿನ ಲಿಂಗಣ್ಣೋರೂ ಹಿಂಗೇ ದಬಾಯಿಸಿದ್ರು .. ಗುರುವೆ....ಕೇಳಿ ....ನಿಮಗೇನು ಮೋಸಮಾಡೋಕಿಲ್ಲ. ಕಳ್ಳಭಟ್ಟಿ ಇಳಿಸೋ ಕೇಸು ತಿಂಗಳಿಗೆ ಎರಡು ಸಿಕ್ಕರೆ ಸಾಲ್ದ ?—ನೂರು ಸಂಸಾರ ಐತೆ—ಸರ್‍ತಿ ಮೇಲೆ ಮಾಮೂಲಾಗಿ ಬಂದ್ಹಂಗೆ —ಎರಡು ಆದ್ಮಿ ಸಿಕ್ಕಿಬೀಳ್ತೀವಿ... ಎರಡು ಕೊಡ ಕಳ್ಳು ಸಿಕ್ಕಬೀಳೋ ಹಂಗೆ ಮಾಡ್ತೀವಿ .. ಇನ್ನೇನು ಧಫೆದಾರ್‍ರೆ ಚಿಂತೆ? ಒಳ್ಳೆ ಮನೆಮಾಡಿ ಕೊಡ್ತಿನಿ—ಅಮ್ಮಾ ವರನ್ನ ಕರಸಿ—ಮೊನ್ನೆ ಎರಡು ತೋಟ ತೊಗೊಂಡೆ—ಬೇಕಾದ್ದೋನು ತರ್‍ಕಾರಿ ಕಳಿಸ್ತೆನಿ—ಹಾಲು ಅಣ್ಣು ಕಳಿಸ್ತಿನಿ ...ಕೇಸು ಭರ್ಜರಿ ನಡೆಯೋ ಹಂಗೆ ಆಗ ಈಗ ಗ್ಯಾಂಗೇ ಇಡುಕೊಟ್ಟಂಗೆ ಮಾಡ್ತಿನಿ ...ಈಸೊಂದು ಕೇಸು ಸಿಕ್ರೆ—ನೀವು ಸಬ್‌ಇನ್ ಸ್ಪೆಕ್ಟ್ರಗೋದು ಕಷ್ಟನಾ? ನನ್ನ ಕೈಲಾಗೋಕಿಲ್ವಾ ಇದು!...." ಎಂದ ಪೀಕ್ಯಾ. ಅವನ ಪ್ರತಿಯೊಂದು ಮಾತೂ ನಿಜವಾಗಿತ್ತು. ಸ್ವಾಮಿ ಕಾರ್ಯಕ್ಕೆ ಕೇಸು— ಸ್ವಕಾರ್ಯಕ್ಕೆ ತರ್‍ಕಾರಿ ...ಭಡ್ತಿಗೆ ಭಡ್ತಿ... ಬಾಯಲ್ಲಿ ನೀರು ಬಂತು, ದೇರಣ್ಣೋರಿಗೆ. ನಸುನಕ್ಕು ಆಳವಾಗಿ ಪೀಕ್ಯಾನ್ನ ನೋಡಿದರು. 'ಅವ ಸಲಾಂ ಹೊಡೆದು ಹೊರಬಿದ್ದ. ಮರುದಿನವೇ ಮನೆಸಿಕ್ಕಿತು. ಸಾವಂತ್ರಿಗೆ ಟೆಲಿಗ್ರಾಂಕೊಟ್ಟರು ಕೂಡಲೆ ಹೊರಟು ಬಾ ಎಂದು. ರಾತ್ರಿ ಎಲ್ಲಾ ಸವಿಗನಸು ದII ದೇರಣ್ಣೋರಿಗೆ.

|| ಅನ್ನದಾತಾ ಸುಖೀಭವ ||

—ದಾಶರಥಿ ದೀಕ್ಷಿತ.

—— ೦ ——

# ಗಜಗಮನ

ಅಮೇರಿಕದ "ನ್ಯಾಷ್‌ವಿಲ್ ಬ್ಯಾನರ್" ಎಂಬ ಪತ್ರಿಕೆಯ ಮಾಲೀಕರು ಶ್ರೀಮತಿ ಗಾರ್ಡ್‌ನರ್ ಹಾಲ್ ಎಂಬಾಕೆಯನ್ನು ಆರಿಸಿ, ಅವರನ್ನು ಸಿಂಹಳ ದ್ವೀಪಕ್ಕೆ ತಮ್ಮ ಖರ್ಚಿನಲ್ಲಿ ಕಳುಹಿಸಿರುವರಂತೆ. ಅಂದರೆ, ಆಕೆಯಿಂದ ಆ ಪತ್ರಿಕೆ ಬಾಳುವಂತಿಲ್ಲವೆಂದಲ್ಲ-ವಿಶೇಷ ಲೇಖನವೊಂದನ್ನು ಸಿಂಹಳ ದ್ವೀಪದಿಂದ ಆಕೆ ಬರೆದು ಕಳುಹಿಸುವ ಸಲುವಾಗಿ! ಲೇಖನ ಸಿಂಹಳ ದ್ವೀಪರ ನಡೆ ನುಡಿ, ಬೆಟ್ಟಗುಡ್ಡ, ಟೀ ರಬ್ಬರ್ ಡಡ್ಲಿ ಸೇನಾನಾಯಕ ತಮಿಳರು ರೇಷನ್ ಕಾರ್ಡು ಇವುಗಳೊಂದಕ್ಕೂ ಸಂಬಂಧ ಪಟ್ಟಿದ್ದಲ್ಲ. ಪತ್ರಿಕಾ ಮಾಲೀಕರು ಆಕೆಯನ್ನು ಕೇಳಿರುವುದು, "ನಾನು ಆನೆ ಮೇಲೆ ಕೂತಿದ್ದು"—ಎಂಬ ಶಿರೋನಾಮೆಯ ಒಂದು ಲೇಖನ!....ಹುಚ್ಚು;

ಇದಕ್ಕಾಗಿ, ಆತ ಆಕೆಯನ್ನೇಕೆ ಸಾವಿರಾರು ರೂಪಾಯಿ ಖರ್ಚಿನಲ್ಲಿ ಇಷ್ಟು ದೂರ ರವಾನಿಸಬೇಕಾಯಿತು. ನಾನೇ ಇಲ್ಲಿಂದಲೇ ಕಳುಹಿಸಿರುವೆ, ಶಾಕಾಯ ಪಲಣಾಯ, ಏನಾದರೂ ಒಂದಿಷ್ಟು ಪುಡಿಕಾಸು ನನಗೆ ಕೊಟ್ಟಿದ್ದರೆ, ಸಾಕಾಗಿತ್ತು.

ಆನೆ ಮೇಲೆ ನಾನೂ ಕೂತಿದೇನೆ, ಟೌನು ಹಾಲ್ ಮುಂದಿನ ಕಲ್ಲಾನೆ, ಎಕ್ಸಿಬಿಷನ್‌ನಲ್ಲಿನ ಮರಿಯಾನೆ, ಆನೆ ತಬೇಲಿಯ ದೊಡ್ಡಾನೆ, ಅರಣ್ಯ ಇಲಾಖೆಯ ಗಂಡಾನೆ. ಎಲ್ಲದರ ಪರಿಚಯವೂ ನನಗಿದೆ. ನನ್ನನ್ನ ಕೇಳೋದು ಬಿಟ್ಟು, ಆ ಹೆಂಗಸಿಗೇಕೆ ಅಷ್ಟೊಂದು ತ್ರಾಸ ಇತ್ತ, ಮಾರಾಯ?

ಆನೆಯ ಮೇಲೆ ಕೂರ ಬೇಕಾದರೆ, ಮೊದಲು ಬೇಕಾದದ್ದು, ಜಾತಕ; ಜಾತಕ ದಲ್ಲಿ ಗಜಾರೋಹಣಯೋಗ, ಅಂದರೆ, ಜಾತಕದಲ್ಲಿ ಶನಿಗೊಂದು ಮನೆ, ಗುರುವಿಗೆ ಅದರ ಎದುರು ಮನೆ, ರಾಹು ಕೇತುಗಳಿಗೆ ಅಕ್ಕಪಕ್ಕದವಾಸ, ಇತ್ಯಾದಿ. ಎರಡನೆಯ ದಾಗಿ ಬೇಕಾದದ್ದು, ಆನೆ, ಜೀವಂತ ಆನೆ, ಪಳಗಿದ ಆನೆ, ನಾಡಾನೆ, ಸಸ್ಯಾಹಾರಿ. ಆ ಆನೆಯ ಪಕ್ಕದಲ್ಲಿ, ಅದರ ಸ್ಥಿತಿಗತಿಗಳನ್ನು ಚೆನ್ನಾಗಿ ಅರಿತ ಅದರ ಮಾವುತ, ಮಾವುತನ ಕೈಯಲ್ಲಿ ಬೆತ್ತ, ಅಂಕುಶ, ಕುಂತ.

ಅಷ್ಟೂ ಸಿದ್ಧವಾದ ಮೇಲೆ, **ಆರೋಹಣ.** ಇದನ್ನಂತೂ ನಾಲ್ಕಾರು ಶಾಸ್ತ್ರೀಯರೀತಿಗಳಲ್ಲಿ ನೆರವೇರಿಸಬಹುದು. ಆನೆಯನ್ನು ಕೂರಿಸಿ ಅಥವಾ ನಿಲ್ಲಿಸಿ ಏಣಿ ಒರಗಿಸಿ, ಮೆಟ್ಟಲುಗಳ ಮೇಲಿಂದ ಬೆನ್ನನ್ನು ಪ್ರಾಪಿಸುವುದು, ರಾಜಮಾರ್ಗ. ಸಾಬೂರೀಷ್ಯಾ, ಆನೆಯಿಂದಲೇ ಆನೆಯನ್ನೇರುವುದು—ಸೊಂಡಲಿನ ಸುರುಳಿಯೊಳಗೆ ಸೇರಿಕೊಂಡು—ರಾಕ್ಷಸಮಾರ್ಗ. ಆನೆಯ ಬಲಗೈಯನ್ನು ಎತ್ತಿಸಿ ಮಡಸಿಸಿ, ಅದರ ಮೇಲೆ ಕಾಲನ್ನಿರಿಸಿ ಕಿವಿ ಹಿಡುದುಕೊಂಡು ಕಸರತ್ತುಮಾಡಿ, ಕುತ್ತಿಗೆಯ ಸುತ್ತಣ ಹಗ್ಗವನ್ನು ಜಗ್ಗಿಸಿ, ನೆಗೆದೇರುವುದು ವೀರಮಾರ್ಗ. ಹಿಂಗಾಲನ್ನು ಮಡಿಸಿಸಿ, ಬಾಲವನ್ನು ಹಿಡಿದು ಹಿಂದುಗಡೆಯಿಂದ, ಚಿತ್ರಕಲ್ ದುರ್ಗವ ಬಂಡೆಯನ ಪುತ್ತ ಏರುವಂತೆ, ಪರ್ವತವನ್ನು ಹತ್ತುವುದು ಆಸೂರಿಮಾರ್ಗ. ಇವುಗಳಲ್ಲಿ ಮೊದಲನೆಯುದಕ್ಕೆ, ಆನೆ ಭದ್ರವಾಗಿ ನಿಂತಿರಬೇಕು; ಎರಡನೆಯದಕ್ಕೆ ಹೃದಯ

ನಿಲ್ಲದೆ ಇರಬೇಕು; ಮೂರು ನಾಲ್ಕು ಈ ಕ್ರಮಗಳಿಗೆ ಅಭ್ಯಾಸಬೇಕು; ನಮಗಲ್ಲ, ಆನೆಗೆ.

ಆನೆಯ ಹೊರ ಮೈಮೇಲೆ, ಸೂಜಿಯಂತಹ ಮುಳ್ಳುಗಳಿರುವುದಿಂದ, ನಮ್ಮ ಹೊರಮೈ ತರಿದು ಗಾಯಗಳಾಗುವ ಸಂಭವವಿದೆ ಎಂದು ಎಲ್ಲರನ್ನೂ ಎಚ್ಚರಿಸುವ ಭಾರ ನನ್ನದು. ಅಲ್ಲದೆ, ತನ್ನ ಬೆನ್ನ ಮೇಲೆ ಯಾರನ್ನು ಕೂರಿಸಿಕೊಳ್ಳಬಹುದು, ಬಾರದು, ಎಂಬುದರ ವಿಷಯವಾಗಿ, ಆನೆಗೆ ಪಕ್ಷಪಾತವಿದೆ. ಆದ್ದರಿಂದ, ಹತ್ತುವ ಮೊದಲು, ಆನೆಯನ್ನು ಕೇಳುವುದು, ಕ್ಷೇಮ. ಇಲ್ಲದಿದ್ದರೆ, ಅದರ ಎರಡು ಕಣ್ಣುಗಳನ್ನೂ ಮುಚ್ಚಿ ಹಿಡಿಸುವುದು ಒಳ್ಳೆಯದು. ಕಬ್ಬಿನ ಲಂಚದಿಂದ ಹಲವು ಆನೆಗಳನ್ನು ಒಪ್ಪಿಸಬಹುದು.

ನಿಂತಿರುವ ಆನೆಯ ಮೇಲೆ ಕೂಡುವುದು ಅಷ್ಟು ಕಷ್ಟವಾಗಲಾರದು, ನಾಲ್ಕೈದು ದಿಂಬುಗಳನ್ನು ನಮ್ಮ ಹಿಂಭಾಗಕ್ಕೆ ನಾವು ಕಟ್ಟಿಕೊಂಡು ಕೂತರೆ; ಕೆಳಗೆ ನೋಡದೆ, ಕಣ್ಣು ಮುಚ್ಚಿಕೊಂಡರೆ.

ಆದರೆ, ಕೂತಮೇಲೆ, ಆನೆಯನ್ನು ನಡೆಸಿದರೆ, ಆಗ ಪ್ರಾರಂಭವಾಗುತ್ತದೆ, ಪ್ರಾಣಸಂಕಟ. ಆನೆ ನಡೆಯುವುದು, ನಮ್ಮ ಹಾಗಲ್ಲ. ನಮಗಿರುವುದು, ಎರಡೇ ಕಾಲು. ಆದರೆ, ಆನೆ ಅಂಬೆಗಾಲಿಕ್ಕುತ್ತದೆ. ಬಲಗೈಯನ್ನೆತ್ತಿ (ಆಗ, ಬಲಭುಜದ ಒಳಗಿನೆಲುಬು ಚರ್ಮದೊಳಗಿಂದ ಮೇಲೆದ್ದು ನಮ್ಮನ್ನು ಅರ್ಧ ಅಡಿ ಮೇಲಕ್ಕೆ ತಳ್ಳುತ್ತದೆ) ಒಂದು ಗಜ ಮುಂದಿಡುವುದರೊಳಗೆ, ಎಡಗೈ ಹಾಗೂ ಬಲಗಾಲು ಇವೆರಡೂ ನೆಲವನ್ನು ಬಿಟ್ಟು ಮೇಲಕ್ಕೆದ್ದು (ಆಗ, ನಮ್ಮ ಪೀಠದ ಎಡಪಕ್ಕವನ್ನೂ ಅದೇ ರೀತಿ ಒಳಮೂಳೆ ಒತ್ತಿ ಎತ್ತರಿಸುತ್ತದೆ) ಒಂದೊಂದು ಗಜ ಮುಂಬರುತ್ತವೆ. ಬಲಗಾಲು ಮುಂದೆ ಬರುವಾಗ, ನಮ್ಮನ್ನು ಯಾರೋ ಹಿಂದಿನಿಂದ ಮುಂದಕ್ಕೆ ನೂಕಿದ ಹಾಗಾಗುತ್ತೆ. ಅದು ನೆಲಕ್ಕೂರಿದಾಗ ನಾವೂ ದುಢುಂ ಅಂತ ಆನೆಯ ಬೆನ್ನ ಮೇಲೆ ಕುಕ್ಕರಬಡಿಯುತ್ತೇವೆ. ನಮ್ಮ ಕೆಳಮೂಳೆಯನ್ನು ಯಾರೋ ಎತ್ತಿ ಇರಿಸಿ ನೂಕಿ ಹಾಕಿ ಏರಿಸಿ ಇಳಿಸಿ ಆನೆ ನಡೆಯುವಾಗ, ಅದರ ಪ್ರತಿಕ್ರಿಯೆ ನಮಗೆ ನೂರ್ಮಡಿಯಾಗಿ ಸಾವಿರಮಡಿಯಾಗಿ ತಗುಲದೇ ವಿಧಿ ಇಲ್ಲ.

ನೋವನ್ನು ತಾಳಲಾರದೆ, ಕಿರಿಚೋಣವೆಂದರೆ, ಐರಾವತದ ಮೇಲಿನ ಇಂದ್ರನ ಪದವಿ! ಕೆಳಕ್ಕೆ ಧುಮುಕೋಣವೆಂದರೆ, ಪ್ರಾಣಭೀತಿ! ಮಾವುತನನ್ನ ಕೂಗಿ, ಆನೆಯನ್ನು ನಿಲ್ಲಿಸೋಣವೆಂದರೆ, ಆತ ಎಲ್ಲೋ ಕಾಣಿಸುವುದೇ ಇಲ್ಲ. ನಿಧಾನವಾಗಿ ಇಳಿಯೋಣವೆಂದರೆ, ಏಣಿ ತರುವವರು ಯಾರು? ಸೊಂಡಿಲ ಸುರುಳಿ ಎಲ್ಲಿ? ಕಿವಿ ಬಾಲ, ಯಾವ ಆಸರೆ ಬೇಕಾದರೂ, ನಾವು ಬಗ್ಗಬೇಕು, ಬಗ್ಗುವುದಕ್ಕಾಗುವುದಿಲ್ಲ, ಬೆನ್ನು ನೋವು, ಸೊಂಟ ಡೊಂಕು.

ತಲೆಯಮೇಲಕ್ಕೆ ಸರಿಯಾಗಿ, ಯಾವುದಾದರೂ ಸಾಲುಮರದ ಕೊಂಬೆ ಸಿಕ್ಕರೆ ನಮ್ಮ ಪುಣ್ಯ.

—ಸಂಪತ್.

# ಕೊರವಾವಲೋಕನ

ಬಹಳ ಬಹಳ ಬಿಸಿ ಬಿಸಿ ಕಾಫಿ ಒಂದು ಗುಟುಕು ಕುಡಿದರೆ ನಾಲಿಗೆ ತುದಿ ಚುರ್ರೆನ್ನುತ್ತೆ ಅಲ್ಲವೇ! ಆಮೇಲೆ ಅರ್ಧಗಂಟೆ ಹೊತ್ತು ನಾಲಿಗೆ ತುದೀನೇ ರುಚಿ ನೋಡೋಹಾಗಾಗುತ್ತೆ. ಅಲ್ಲವೇ! ಹುಷ್ ಹುಷ್ ಅಂತ ಉಸಿರು ಒಳಕ್ಕೆ ತೆಗೆದು ಕೊಳ್ಳುತ್ತಲೇ ಇರಬೇಕು.

(ಹಾಗೆ ಮಾಡುತ್ತಿದ್ದ ಕೊರವ ರಥಸಪ್ತಮಿ ದಿನ, ಕ್ಲಬ್ಬಿನಲ್ಲಿ ಸಿಕ್ಕಾಗ)

"ಯಾಕೋ ಹುಳಿಯನ್ನದ ಮೆಣಸಿನಕಾಯಿ ತಪ್ಪಿತಿಂದೆಯೇನೋ".ಎಂದೆ.

ಹುಷ್ ಅಂತ ಉಸಿರು ಒಳಕ್ಕೆ ತೆಗೆದುಕೊಂಡು ಅವನಂದ "ಇಲ್ಲಾ ರಾ. ಶಿ. ಮಹಾತ್ಮ ಪೊಟ್ಟಿ ಶ್ರೀರಾಮುಲು ಎಂದು ನಿರಶನವ್ರತ ಹಿಡಿದು ಆತ್ಮಯಜ್ಞಮಾಡಿ ಕೊಂಡನೋ, ಎಂದು ಆಂಧ್ರಪ್ರಾಂತ್ಯ ನಿರ್ಮಾಣವಾಗಲಿ ಎಂದು ಕೇಂದ್ರ ಸರ್ಕಾರ ದವರು ಘೋಷಿಸಿದರೋ, ಅಂದೇ ಮನೆ ಮನೆಯಲ್ಲೂ ಈ ಆಂಧ್ರಪ್ರಾಂತದ ರಚನೆ ಯಾದದ್ದು ನನಗೆ ಗೊತ್ತಿರಲಿಲ್ಲ. ಈ ಸಾಯಂಕಾಲ ಚೆಲುವಯ್ಯಂಗಾರ್ಯನ ಮನೆ ಯಲ್ಲಿ 'ಟೀ'ಗೆ ಕರೆದಿದ್ದರು. "ಯಾರು ಚೆಲುವಯ್ಯಂಗಾರಿ" ಎನ್ನುವ ರೀತಿ ಹುಬ್ಬು ಎತ್ತಿದೆ.

ಅದನ್ನು ನೋಡಿ ಕೊರವ ಹೇಳಿದ. ಚೆಲುವಯ್ಯಂಗಾರಿ ಗೊತ್ತಿಲ್ಲವೇ!

ಮೊನ್ನೆ ಮೊನ್ನೆ ಅಮೇರಿಕಾದಿಂದ ಜಯಭೇರಿ ಹೊಡೆದುಕೊಂಡು, ಮುಂಬ ರುವ ನೋಬೆಲ್ ಪಾರಿತೋಷಕಾಗ್ರಣಿ ಎಂದು ಹೊಗಳಿಸಿಕೊಂಡವ; ಅಮೇರಿಕಾ ದಲ್ಲೇ ವ್ಯಾಸಂಗ ಮಾಡಿದ ಆಂಧ್ರ ರಮಣಿ ಪುಲುಸು ಹೆಣ್ಣನ್ನು ಮದುವೆಯಾದವ. ಅವ ನನ್ನ ಹತ್ತಿರ ಕೆಲವು ದಿನ ಇಸ್ಪೀಟ್ ಆಟ ಹೇಳಿಸಿಕೊಂಡಿದ್ದ. ನನ್ನನ್ನು ಕಂಡರೆ ಮರ್ಯಾದೆ, ಪ್ರೀತಿ, ಇತ್ಯಾದಿ, ಅವನು ತನ್ನ ಹೊಸ ಮನೆಗೆ ಟೀಗೆ ಕರೆ ದಿದ್ದ ನಾನೂ ಹೋಗಿದ್ದೆ.

ಅಂತ ಮುಂದುವರೆಸಿದ-ಒಂದು ಬಟ್ಟಲು ತಣ್ಣೀರು ಕುಡಿದು. ಅವರ ಮನೆ ಯಲ್ಲಿ 'ಟೀ' ಬಲ್ಸೊಗಸು. ಆದರೆ ಈ ದಿನ ಬ್ರೆಡ್ಡಿನ ಸ್ಯಾಂಡ್‌ವಿಚ್ಚಿಗೆ ಏನೋ ಪಚಡಿಯಂತೆ ಗೊಂಗುರಂತೆ ಅದನ್ನು ಹಾಕಿ ಮಾಡಿದ್ದರು. ಒಂದೇ ಚೂರು ತಿಂದೆ. ಕಣ್ಣೀರುಬಂತು. ಘಮ ಘಮಿಸುವ ಬೋಂಡ ಕೊಟ್ಟರು. ಆಸೆಯಿಂದ ಬಾಯಿ ಗಿಟ್ಟಿ-ಕಣ್ಣೀರು ಧಾರಾವಾಹಿನಿ ಆಯ್ತು. ನನ್ನ ಕರವಸ್ತ್ರ ಒದ್ದೆಯ ಮುದ್ದೆ ಯಾಯ್ತು. ಚೆಲುವಯ್ಯಂಗಾರಿ ಕೇಳಿದ ಏನು ಬೇಕು ಅಂತ. ತಿನ್ನಲಿಕ್ಕೆ ಏನೂ

ಬೇಡ. ಆದರೆ ಕಣ್ಣೊರೆಸಿಕೊಳ್ಳಲು ಒಂದು ಮಗ್ಗಲು ಹಾಸಿಗೆ ಕೊಟ್ಟರೆ ಕೃತಾರ್ಥ ನಾಗುತ್ತೇನೆ ಎಂದೆ. ಆಗಲೇ ನಾನು ಕಂಡಿದ್ದು ಅವನು ಬರೀ ಟೀ ಮಾತ್ರ ಕುಡಿ ಯುತ್ತಿದ್ದ, ಏನನ್ನೂ ತಿಂದಿರಲಿಲ್ಲ ಎಂಬುದನ್ನು. ಆ ಪುಲುಸು ರಮಣಿ ಒಬ್ಬಳೇ ತಟ್ಟೆಗಳನ್ನೆಲ್ಲಾ ಖಾಲಿ ಮಾಡಿದ್ದಳು.

ಅವ ಮಗ್ಗುಲು ಹಾಸಿಗೆ ತಂದುಕೊಡಲಿಲ್ಲ. ಆದರೆ ತಕ್ಷಮಟ್ಟಿಗೆ ದೊಡ್ಡ ದಾದ ಸ್ನಾನದ ಟವಲನ್ನು ಕೊಟ್ಟ. ಕಣ್ಣೀರನ್ನು ಒರಸಿಕೊಂಡಮೇಲೆ ಆ ಟವಲೂ ಒದ್ದೆಯಾಗಿತ್ತು ಹಿಂಡಿ ಹರವಿಹಾಕು ಎಂದು ಹೇಳಿ ಅವನ ಕೈಲಿ ಕೊಟ್ಟು, ವಂದನೆ ಗಳನ್ನು ಅರ್ಪಿಸಿ ಹೊರಟೆ.

ಕಾರಿನ ತನಕ ಬೀಳ್ಕೊಡಲು ಬಂದು, ಕಾರಿನಲ್ಲಿ ಕೂತಮೇಲೆ ಅವ ಹೇಳಿದ. "ನೋಡೀಸಾರ್! ಈ ಆಂಧ್ರಪ್ರಾಂತ್ಯದ ವಿವಾದ ಬರೋತನಕ, ನಮ್ಮ ಸಂಸಾರ ಸ್ವರ್ಗಸೀಮೆಯಂತಿತ್ತು. ನಾನು ತಮಿಳಿನವ, ಅವಳು ಆಂಧ್ರಮಣಿ ಎನ್ನುವ ಭಾವ ನೆಯೇ ಬಂದಿತ್ತಿಲ್ಲ. ಎಷ್ಟು ಹದವಾಗಿ ಪುಳಿಯೋಗರೆ ಮಾಡಿಸುತ್ತಿದ್ದಳು! ದಧ್ಯೋ ದನ ಜ್ಞಾಪಿಸಿಕೊಂಡರೆ. ಈಗಲೂ ನಾಲಿಗೆಯಲ್ಲಿ ನೀರೂರುವುದು ಇರಲಿ, ಒಂದು ತರಹ ಸಮಾಧಿ ಸ್ಥಿತಿಯೇ ಬರುತ್ತೆ ನನಗೆ!!

ಆದರೆ ಈಗ, ಈ ಆಂಧ್ರಪ್ರಾಂತದ ರಚನೆಯ ಹುಟ್ಟು ಶುರುವಾದಮೇಲೆ, ನೀವು ಕಂಡಹಾಗೇ ಗೊಂಗುರುಪಚಡಿ ಸ್ಯಾಂಡ್ ವಿಚಿಸ್, ಆವ್‌ಕಾಯಿ ಬೋಂಡ, ಮಿರುಪುಕಾಯಿ ಸಂಡಿಗೆ, ಇವೇ ತಟ್ಟೆಯ ಮೇಲೆ ತಾಂಡವವಾಡುತ್ತಿವೆ.

ವಾಂಚೂ ಅವರು, ಛೂ, ಬಿಟ್ಟು ಆಂಧ್ರಪ್ರಾಂತ್ಯಕ್ಕೆ ತಳಹದಿ ಹಾಕಿದ ಕೂಡಲೇ, ನಾನು ವಿವಾಹವಿಚ್ಛೇದನಕ್ಕೆ ನ್ಯಾಯಮೂರ್ತಿ ವಾಂಚೂ ಅವರಿಗೇ ಅರ್ಜಿ ಗುಜರಾಯಿಸುತ್ತೇನೆ. ಎಂದು ಹೇಳಿ ಗಳಗಳನೆ ಹಸಿದ ಹಾರುವ ಅಳುವ ಹಾಗೆ ಅತ್ತ.

ನನ್ನ ಎದೆ ತುಂಬಿ ಬಂದು, ಗಂಟಲಲ್ಲೇನೋ ಒತ್ತಿ ಬಂಧು, ಹೊಟ್ಟೆಯ ಲೇನೋ ಅಮುಕಿ ನಿಂದು, ಮೋಟಾರೇನೋ ಕ್ಲಬ್ಬಿಗೆ ತಂತು ನನ್ನನ್ನ. ಇಷ್ಟು ಹೊತ್ತು ಮಾತನಾಡುವ ವೇಳೆಗೆ ಮೂರು ದೊಡ್ಡ ಗ್ಲಾಸು ಥಂಡಾ ನೀರು ಕುಡಿದಿದ್ದ ಕೊರವ.

ಆಗನ್ನಿಸಿತು ನನಗೆ–ಆಂಧ್ರಪ್ರಾಂತ್ಯ ನಿರ್ಮಾಣವಾಗುವ ಹೊತ್ತಿಗೆ ಇಂತಹ ಮನೆಗಳಲ್ಲಿ ಇನ್ನುಮೇಲೆ ಅದೇಗತಿ ಎಂದು, ಆದರೆ? ಜನಮೇಜಯರಾಯನ ಕಾಲ ದಿಂದ ಒಂದೊಂದು ಸಂಸಾರದಲ್ಲೂ ಇದೇ ರೀತಿ, ಭಾಷಾವಾರು, ಅಂದರೆ ಅಗ್ನಿ ಸಾಕ್ಷಿಯಾಗಿ ಭಾಷೆ ಕೊಟ್ಟ, ವಾರು ಇದ್ದೇ ಇದೆಯಲ್ಲಾ ಅಂತ ಮರುಯೋಚನೆ ಹೊಳೆಯಿತು.



VITOFERRIN



MYSORE INDUSTRIAL & TESTING LABORATORY LTD. MALLESWARAM BANGALORE

# ವೈಟೋಫೆರಿನ್

(ಆಧುನಿಕ ಶಕ್ತಿವರ್ಧಕ ಟಾನಿಕ್)

ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್‌ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಖಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ.



**ತಯಾರಕರು :**

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರೇಟರಿ ಲಿಮಿಟೆಡ್,**

**ಮಲ್ಲೇಶ್ವರಂ - - - ಬೆಂಗಳೂರು 3.**

## 6-2-1953 ರಿಂದ ಅಮೋಘ ಪ್ರಾರಂಭ

ಬೆಂಗಳೂರು ಶಾರದ ★ ರೂಪಮಹಲ್
(ಸಿಟಿ) (ಸಿವಿಲ್ ಏರಿಯಾ)

ಮೈಸೂರು: ಪ್ರಭುದೇವ



ಭಾಸ್ಕರ್ ಪ್ರೊಡಕ್ಷನ್ಸ್‌ರವರ

# ಬದುಕುವ ಮಾರ್ಗ

## (BRATHUKU TERUVU) (ತೆಲುಗು)

ಭೂಮಿಕೆ: ಶ್ರೀರಂಜನಿ-ನಾಗೇಶ್ವರರಾವ್-ಸಾವಿತ್ರಿ-
ಎಸ್. ವಿ. ರಂಗರಾವ್-ರೇಲಂಗಿ

ಸಂಗೀತ: ಘಂಟಸಾಲ ಮತ್ತು ಲೇಟ್ ಸುಬ್ಬರಾಮನ್

ನಿರ್ದೇಶನ: ರಾಮಕೃಷ್ಣ

For Bookings contact:

**Chamria Talkie Distributors,**

GANDHI NAGAR : : : BANGALORE 2

**FACE —**

*the index of Your Charm*






# RAJA SNOW

*Protects the Face enhances its Charm*

**MANYAM & CO.**

BANGALORE . MADRAS , MATHURAI , BOMBAY.

# ಪ್ರತಿದಿನ ಕೊಳೆಯಿರುತ್ತದೆ
## ನಿಮ್ಮ ಆರೋಗ್ಯವನ್ನು ಕೊಳೆಯಲ್ಲಿರುವ ಕ್ರಿಮಿಗಳಿಂದ



## ಲೈಫ್‌ಬಾಯ್‌ನ ರಕ್ಷಿಸುವ ನೊರೆಯಿಂದ ಕಾಪಾಡಿರಿ!



ನೀವು ಎಷ್ಟೇ ಎಚ್ಚರಿಕೆಯಿಂದಿದ್ದರೂ, ಎಲ್ಲೆಲ್ಲಿಯೂ ಕೊಳೆಯಲ್ಲಿರುವ ಕ್ರಿಮಿಗಳು ಅಪಾಯವನ್ನುಂಟುಮಾಡುತ್ತವೆ ನಿಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳಲು ಪ್ರತಿದಿನ ಲೈಫ್‌ಬಾಯ್ ಸೋಪಿನಿಂದ ಸ್ನಾನ ಮಾಡಿರಿ. ಅದರ ನೊರೆಯು ಕೊಳೆಯಲ್ಲಿರುವ ಕ್ರಿಮಿಗಳನ್ನು ಓಡಿಸುತ್ತದೆ. ನಿಮ್ಮನ್ನು ಯಾವಾಗಲೂ ಉಲ್ಲಸಿತರನ್ನಾಗಿ ಮಾಡುತ್ತದೆ.



## ಲೈಫ್‌ಬಾಯ್ ಸೋಪು

L 227A 50 KN

# ದಿನದಿನಕ್ಕೂ ಹೆಚ್ಚು ಸ್ವಚ್ಛವಾದ ಸುಂದರ ಚರ್ಮ

ರೆಕ್ಸೋನದಲ್ಲಿರುವ **ಕ್ಯಾಡಿಲ್** ನಿಮ್ಮಲ್ಲಿ ಈ ಅದ್ಭುತ ಬದಲಾವಣೆಯನ್ನುಂಟುಮಾಡಲಿ

ರೆಕ್ಸೋನದ ಕ್ಯಾಡಿಲ್‌ಯುಕ್ತ ನೊರೆಯನ್ನು ನಿಮ್ಮ ಚರ್ಮಗತವಾಗುವಂತೆ ಉಜ್ಜಿ, ತೊಳೆಯಿರಿ. ನಿಮ್ಮ ಚರ್ಮವು ದಿನದಿನಕ್ಕೂ ಹೆಚ್ಚು ಮೃದುವಾಗಿಯೂ, ತಿಳಿಯಾಗಿಯೂ ಆಗುವುದನ್ನು ನೀವು ನೋಡುವಿರಿ.




## ರೆಕ್ಸೋನ

**ಕ್ಯಾಡಿಲ್* ಇರುವ ಒಂದೇ ಸೋಪು**

* ಮೃದುತ್ವವನ್ನು ಕೊಡುವ ಪುಷ್ಟಿಕರವಾದ ಚರ್ಮದ ತೈಲಗಳ ಒಂದು ವಿಶಿಷ್ಟ ಮಿಶ್ರಣದ ರಿಜಿಸ್ಟರ್ಡ್ ಹೆಸರು.

RP 100-50 KN

ರೆಕ್ಸೋನ ಪ್ರೊಪ್ರೈಟರಿ ಲಿಮಿಟೆಡ್ ಅವರಿಗಾಗಿ ಭಾರತದಲ್ಲಿ ತಯಾರಿಸಿದೆ

# 6-3-53ರಿಂದ ಅಮೋಘ ಪ್ರಾರಂಭ

## ಬೆಂಗಳೂರು

## ಮಿನರ್ವಾ ಮತ್ತು ಸೆಂಟ್ರಲ್



ರಾಜಾ ಪ್ರೊಡಕ್ಷನ್ಸ್‌ರವರ

# ಪುಟ್ಟಿಲ್ಲು

(ತವರು ಮನೆ)—ತೆಲುಗು

**ಡಾ॥ ರಾಜಾರಾವ್, ರಮಣಾರೆಡ್ಡಿ, ಜಮುನ, ಸುರಭಿ ಕಮಲ**

ಡೈರೆಕ್ಟರ್ : ಡಾ॥ ರಾಜಾರಾವ್

ಫೋಟೋಗ್ರಫಿ : ವಿ. ಎನ್. ರೆಡ್ಡಿ ಮತ್ತು ಅಜಿತ್ ಕುಮಾರ್.

ಸಂಸ್ಥಾನದ ಇತರ ಕೇಂದ್ರಗಳಲ್ಲಿ ಶೀಘ್ರದಲ್ಲಿಯೇ ನಿರೀಕ್ಷಿಸಿ.

**A Vijaya Talkie Distributors Release.**